# ಜೇನೆರಿ

## ಗೌಡಕನ್ನಡದ ಲಿಪಿ ಬಳಸಿದ ಪ್ರಥಮ ಕೃತಿ

**ಯಶವಂತ ಕುಡಕಲ್ಲು**

**ಬಂಟಮಲೆ ಪ್ರಕಾಶನ**
ಗುತ್ತಿಗಾರು, ಸುಳ್ಯ ತಾಲೂಕು, ದ. ಕ.
2007

**JENERI** - an anthology of gowdakannada poems by **Yashwantha Kudakal**, published by A. K. Himakara for Bantamali Prakashana, Guthigar (Post) Sullia Taluk, D.K - 574218. Ph.: 9449486754

# ಜೇನೆರಿ

ಯಶವಂತ ಕುಡಕಲ್ಲು,

ಪ್ರಕಾಶಕರು :

**ಬಂಟಮಲೆ ಪ್ರಕಾಶನ,**

ಗುತ್ತಿಗಾರು, ಸುಳ್ಯಾ ತಾಲ್ಲೂಕು,

ದ.ಕ. ಕರ್ನಾಟಕ-574218.

ಪ್ರಥಮ ಮುದ್ರಣ : ೨೦೦೭

ಮುಖಪುಟ ವಿನ್ಯಾಸ :

**ಪ್ರಸಾದ ಗೌಡ,** ಪುತ್ತೂರು

ಒಳಚಿತ್ರಗಳು :

**ಎ. ಕೆ. ಹಿಮಕರ.**

# ಪರಿವಿಡಿ

# ಸುರೂನ ಮಾತ್

**- ಎ. ಕೆ. ಹಿಮಕರ**



ಹೋದ ವರ್ಷ 'ಕುಡಕಲ್ಲು ಪ್ರಶಸ್ತಿ' ಕೊಡ್ಸಿಕೇಂತ ಡಾ|. ಸುಕುಮಾರಗೌಡ್ರ ಕರ್ಕಣ್ದ್ ಬಾಕೆ ನಾ ಪುತ್ತೂರಿಗೆ ಹೋಗಿದ್ದೆ. ಬಾಕನ ಅದ್/ಇದ್/ ಮಾತಾಡ್ತಾ ನಮ್ಮ ಬಾಸೆ ಸೇರಿದಾಂಗೆ ಬ್ಯಾರಿಗಳ ಮಲ್ಯಾಳ, ಬಟ್ರ್‌ಗಳ ಹವ್ಯಕಬಾಸೆ, ಮಣಿಯಾಣಿಗಳ ಮಲ್ಯಾಳ, ಕೊಂಕಣಿ ಬಾಸೆ ಇನ್ನೊಂದತ್ತ್ ವರ್ಸಲಿ ಸತ್ತೇ ಹೋದವೆ ಅಂತ ಹೇಳ್ದೊ. ಬಾಸೆ ಸಾಯೋ ವಿಸಯಕೇಳಿ ನಂಗೆ ಮೈ ಜುಮ್ಮಂತ ಆತ್. ನಮ್ಮೊದೂಂತ ಇರ್ದು ಸಾಯೊದೂಂತೇಳಿರೆ ಅದ್ ಸೂತಕದ ಸಂಗ್ತಿ. ಸುಕುಮಾರ ಗೌಡ್ರು ಸಾಧಾರಣ ವೊಯಿಸ ಅಲ್ಲ, ಆದ ಕಾರಣ ಅವು ಹೇಳ್ದ್ ನನ್ನ ಮನ್ಸಿಗೆ ನಾಟಿತ್ತ್. ಈ ಜಾಗತೀಕರಣ ತೇಲ್ಡು ನಮ್ಮ ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ಮತ್ತೆಲ್ಲಾ ಪರಿಸ್ಥಿತಿನ ಹಾಳ್ ಮಾಡಿಟು. ನಮ್ಮ ದೆವ್ವ ದೇವ್ರುನ ವೈದಿಕರ್ ಹಾಳ್/ ಮಾಡಿರೆ, ಜಾಗತೀಕರಣ ನಮ್ಮ ಬಾಸೆನನೇ ಲಗಾಡಿಕೊಟ್ಟುಟು. ತೆಗ್‌ಡ್ ತಿಂಬವ ಹೋಗಿ ಉಮಿ ತಿಂಬವನೇ ಬಂದಾಂಗುಟು ನಮ್ಮ ಕತೆ. ಸುಕುಮಾರ ಗೌಡ್ರು ಶಿಕ್ಷಣದ ಮಟ್ಟಿಗೆ ಅದ್ಭುತ ಆಲೋಚನೆ ಇರೊವು. ಇವು ಇಂಗ್ಲಿಷ್‌ಲಿ ಬರ್ದದರ ಶಿವರಾಮ ಕಾರಂತ್ ಕನ್ನಡಕ್ಕೆ ತರ್ಜಿಮೆ ಮಾಡ್ಯೊಳೊಂತೇಳಿರೆ ಸುಕುಮಾರ ಗೌಡ್ರ ತೂಕ ಎಷ್ಟ್/ಂತ ಅಂದಾಜಿಮಾಡ್ಯೊಂಕ್. ಮಕ್ಕಳ ಬಗ್ಗೆ, ಕಲಿದರ ಬಗ್ಗೆ, ನಮ್ಮ ಪಾಠಪುಸ್ತಕ ವಿಚಾರ ಮುಂದೇನಾದ್ದೆಂತ ಗ್ರೇಸುವ ಸೊಕತ್ತ್ ಇರುವ ಜನ ಅವೂಂತ ಹೇಳ್ದರ್ಲಿ ಎರಡ್ ಮಾತ್ ಇಲ್ಲೆ. ಹಾಂಗಾಗಿ, ಸಾಯಾ, ಇರುವ ಬಾಸೆಲಿ ನಮ್ಮ ಗೌಡ್ರ ಬಾಸೆ ಕೂಡಾ ಉಟ್ಟೂಂತ ಹೇಳ್ದ ಸಾಯುವ ಮೇಲೆ ನಾವು ಇನ್ನ್ ಮುಂದೆ ಹಿಂಗೇ ಕುದ್ದರೆ ಆತ್ಲೆಂತ ಯೋಚನೆ ಮಾಡ್ದೆ. ಸಾಯುವನ ಹಿಡ್ಕಣಿಕೆ ಆದುಲೇಂತ ಹೇಳೊವು ಇರ್ರ್ವಾ ಆದರೆ ನಾವಾಗಿ ಕೊಲ್ಲುವ ಕೆಲ್ಸ ಮಾಡಿಕೆ ಆಗದ್. ನಮ್ಮ ಯಾವ್ದೊ ತೆವಲಿಗೆ ಬೇಕಾಗಿ ನಮ್ಮದಲ್ಲದ ಬಾಸೆನ ಮೈಮೇಲೆ ಎಳ್ಕಂಡರೆ, ತೊಪ್ಪೂಂತ್ ಹೇಳಕಾಗದಿದ್ದರೂ ನಮ್ಮೊದ್‌ಂತ ಹೇಳ್ದರ ನಾವೇ ಕಡೆಗಣ್ಸುದ್‌ನೂ ಸರಿಯಲ್ಲ. ಮನೆಲಿರುದರ ಬುಟ್ಟು ಯಾರ್ದೋ ಹೆಂಗ್ಸ್‌ಗೆ ಸೀರೆ ಉಡ್ಸಿದಾಂಗಾತ್‌ಂತ್ ಹೇಳ್ದಾಂಗಾಗುಟು ನಮ್ಮವರ ಕತೆ. ನೀವುಗೆ ನಮ್ಮೊದಲ್ಲದೇ ಪೊರ್ಲು ಕಾಂಬೊದು. ಅದರ ಯೋಗ್ಯತೆ ಏನ್‌ಂತ ಯೋಚನೆ

ಮಾಡಿಕೆ ಇನ್ನಾದ್ರು ಸುರು ಮಾಡೊಕಾದೆ. ನಮ್ಮೊವು ಬಾರೀ ವರ್ಸ ಬಟ್‌್ರಗ ಹೇಳ್ದೀರ ಕೇಳ್ತಾ ಬಂದೊ ಈಗ ಅವನೂ ಸೇರಿಕಂಡ್ ಅಮೆರಿಕದಂವ ಹೇಳ್ದರ ಕೇಳಿಕೆ ಹೊರ್ಟೊಳೊಂ ಹಾಂಗಾಗಿದೆಲ್ಲಿ ಗೌಡ್ರುಗ ಬೆಳ್ಸಿದ ಬೆಳೆಗ ಳಿಗೆ ಮೂರು ಕಾಸ್‌ನ ಬೆಲೆ ಬಂದಿದ್. ನಮ್ಮವರ ಬೆಗ್‌ರ್‌ನ ಬೆಲೆ ನಾವುಗೇ ಗೊತ್ತಾತ್ಲರೆ ಇದ್ ಬಾರೀ ಬೇಜಾರ್‌ನ ಸಂಗತಿ. ನಾವುಗೆ ಹೇಳಿಕೊಡೊಂವ ಬೊದ್ಕಿತ್, ಕೇಳ್ಸಿಕಂಡಂವ ದಾರಿಗೆ ಬೀತ್. ಒಂದು ಕಡೆಲಿ ಎಲ್ಲೊವುಕು ಸಮಾನ ಸಾಲೆ ಬೇಕೂಂತ ಹೋರಾಟ ನಡೀತ ಉಟ್ಟು ಮತ್ತೊಂದು ಕಡೆಲಿ ನನ್ನ ಮಕ್ಕ ಮಾತ್ರ ಬೊದ್ಕಿರೆ ಸಾಕ್‌ಂತ ಲೆಕ್ಕಾಚಾರ ಮಾಡ್ತಾ ಒಳೊಂ ಇಂಥ ಪರಿಸ್ಥಿತಿಲಿ ಸುಕುಮಾರ ಗೌಡ್ರ ಒಳಗೆನ ಬೇನೆ ಹೇಂಗೆ ಅರ್ತಾದೆ ? ನಾ ತೊಟಗಿಲ್‌ಲಿ ಕಲ್ತ ಬಾಸೆ, ಮಾತಾಡ್ಕನ ತೊಟಗಿಲ್ ತೂಗಿದ ಕೈನ ನೆನ್‌ಪಾದೆ. ಸತ್ತ್ ಸ್ವರ್ಗಲಿ ಇರುವ ನನ್ನ ಉಗ್ಗವ್ವ ನನ್ನಕ್ಕಲೆ ಕುದ್ದ್‌ದ್ ಮೈ ಪೂಜಿದಾಂಗೆ ಆದೆ. ನಂಗೆ ನನ್ನ ಬಾಸೆ ವ್ಯವಹಾರದ ಸೋಕಿಗಾಗಿ ಅಲ್ಲ. ಯಾವ ದೊಡ್ಡ ಮೊಯಿಂಸನ ಎದ್‌ರ್ ನಾನೂ ದೊಡ್ಡ ಜನಾಂತ ಮೆರ್ಸಿಕಣಿಕೆನೂ ಅಲ್ಲ. ನಾ ಮಾತಾಡ್ದು ನನ್ನೊಳಗೆ ಇರುವ ನಮ್ಮ ಹಿರಿಯವರ ಇತಿಹಾಸನ ಬಿಸರ್‌ಲಿ. ಈಗ ನಾ ಒಬ್ಬ ಅಲ್ಲ, ಸಾವಿರ ಸಾವಿರ ಜನರ ಬಿಸರ್ ನನ್ನೊಳಗೆ ಉಟ್ಟು.

**ಗೌಡ್ರ ಕವಿಗೋಷ್ಠಿ :**

ಸುಕುಮಾರ ಗೌಡ್ರ ಮಾತ್ ಕೇಳ್ದ ಮೇಲೆ ನಾವ್ ಮಾಡ್ತಾ ಇದ್ದ್‌ದ್ ಸರಿಉಟ್ಟೂಂತ ಅನ್ಸಿತ್. ನಾವು ಸುಮಾರ್ ಹತ್ತ್ ವರ್ಷದ ಹಿಂದೆನೇ ಗೌಡ ಕನ್ನಡದ ಕವಿಗೋಷ್ಠಿನ ಗುತ್ತಿಗಾರ್‌ಲಿ ಮಾಡಿದ್ದೊ. ಅದರ ಆಲೋಚನೆ ನಮ್ಮದಾದರೂ ನಡ್ಸಿ ಕೊಟ್ಟದ್ ಗೌಡರ ಯುವ ವೇದಿಕೆನವು. ಊಟ, ತಿಂಡಿ, ಸಭೆ ಸಾರಿಗೇಂತ ಬಾರೀ ಪೊರ್ಲ್ಲಲಿ ನಡ್ದಿತ್ತ್. ಎಲ್ಲೊವುಕ್ಕೂ ಒಳಗೆಂದ ಕುಸಿ ಆಗಿತ್ತ್. ಹಿಂದೆಂದ ಒಂದಷ್ಟ್ ಜನ ನಂಜಿ ಮಾತ್ತಾಡ್ದ್ ಗೊತ್ತುಟು. ಗೌಡ ಕನ್ನಡ ಕವಿಗೋಷ್ಠಿಗೆ ಎನ್‌ಕೌಂಟರ್ ತೇಲುವಾಂಗೆ ಸುಳ್ಯಲೊಂದು ಬಹುಭಾಷಾ ಕವಿಗೋಷ್ಠಿನೂ ನಡ್ತಿತ್ತ್. ನಮ್ಮದ್‌ಂತ್ ಹೇಳಿರೆ, ಅಲ್ಲಿನೂ ಕೂಡಾ ಗೌಡ ಕನ್ನಡ ಪದ್ಯನೇ ಹೆಚ್ಚಿ ರೈಸಿತ್ತ್‌ಗಡ ! ನಾವು ಅದರ್ನೇ ಜೀವಂತಿಕೆಂತ ಹೇಳ್ದು. ಇಲ್ಲಿ ನಾವು ಮಾತಾಡ್ದು ಅಲ್ಲ, ನಮ್ಮ ಒಳಗಿರುವಂತ ಇತಿಹಾಸದ ಒಸರೇ ಹೆಚ್ಚಿ ಮಾತಾಡ್ದು. ಅದರ ಸುಕ ಮನ್ಸಿಗೆ ಅನ್ಸುವ ಹಾಂಗಿದ್ದದೆ. ಅದ್‌ಕ್ಕೆ ನಮ್ಮ ಹಿರಿಯವು ಹೇಳ್ದು ಮಾತ್‌ಂತ ಹೇಳ್ದು ಮೋರೆಗೆ ತಕ್ಕ ಹಾಂಗೆ ಇರ್ದು ಅಲ್ಲ, ಹೃದಯಕ್ಕೆ ನಾಟುವಾಂಗೆ ಇರೊಕೂಂತ.

**ಯಶವಂತನ ರೆಕಾರ್ಡ್ :**

ಇದಾದ ಮೇಲೆ ನಾವ್ಗೆ ಸಂದರ್ಭ ಅಕನೆಲ್ಲಾ ಈ ಬಗ್ಗೆ ಏನಾರ್ ಮಾಡಕೂಂತ ನಿಶ್ಚಯ ಮಾಡಿರೆನೂ ಏನೂ ಮಾಡಿಕಾತ್ಲೆ. ನಮ್ಮ ಕುಡಕಲ್ಲ್ ಯಶವಂತ ಪದ್ಯ ಬರ್‍ಯೊದರ್‌ಲಿ ಬಾರೀ ಉಸಾರ್‌ಂತ ಗೊತ್ತಾಗಿ ಮೇಲೆ ಅವಂಗೆ ಹೆಚ್ಚ್ ಹೆಚ್ಚ್ ಬರಿಯುಕೂಂತ ಗಾಳಿ ಹಾಕಿಕೆ ಸುರುಮಾಡ್ದೊ. ಬಂಟಮಲೆ ಪ್ರಕಾಸನಡ ಲಿ ಅವನ ಪದ್ಯ ಪುಸ್ತಕನ ಪ್ರಿಂಟ್ ಮಾಡ್ದ ಒಂದು ಸಾವಿರ ಪುಸ್ತಕ ಹಿಂಬೊತಾಕನ ಮುಗ್ದೋತ್. ಮತ್ತೆ ಕೇಳ್ದೊವುಕೆ ಕೊಡಿಕೆ ಪುಸ್ತಕ ಇಲ್ಲೆ. ಒಂದೇ ವಾರಡಲಿ ಮರ್‌ಮುದ್ರಣ ಆತ್. ಇಂಥಾ ಸಂಗ್ತಿ ಸುಳ್ಯಡಲೀ ಅದ್‌ವರೆಗೆ ಆತ್ಲೆ. ಇನ್ನೂರು ಪ್ರಿಂಟ್ ಮಾಡಿರೆ ಎರಡ್ ವರ್ಸ ಕಾಯೊಕು ಆದ್ ಮುಗ್ಯಕೆ. ಪುಸ್ತಕ ದುಡ್ಡ್ ಕೊಟ್ಟ್ ಓದೊವು ಇಲ್ಲೆಂತ ಹೇಳ್ದ ಹೊವುದಾದ್ರನೂ ಯಶವಂತನ ಪುಸ್ತಕ ಮಾರಿಹೋದ್ದ್ ಒಂದು ರೆಕಾರ್ಡ್ ಆಗಿ ಒಳ್ದುಟು. ನಂಗೆ ಅನ್ಸುದು ನಮ್ಮ ಬಾಸೆ, ನಮ್ಮ ವಸ್ತು ವಿಚಾರಕ್ಕೆ ಬೆಲೆ ಬಂದದೇಂತ, ಮತ್ತೆ ಯಶವಂತನ ಸಂಗ್ತಿ ಹೇಂಗೇತೇಳಿರೇ, ಅವ ನೋಡಿಕೆ ಕಾಲೆಜ್ ಹೈದನಾಂಗೆ ಕಂಡರೂ ಯೋಚನೆ ಮಾತ್ರ ತೊಂಬತ್ತರ್ದ್. ಅದೇ ಮೂಲದ ಬಾಸೆ, ಪದ ಬಳಕೆ, ಹೋಲಿಕೆ ಕೊಡ್ದು, ವಿಷಯ ಹೇಳ್ದ ರೀತಿ ಎಲ್ಲದಡ್ಲಿನೂ ನಮ್ಮ ಮೂಲದ ಮೂರಿ ಸಿಕ್ಕಿದೆ. ನಾವು ಕಂಪ್ಯೂಟರ್ ಮೇಲೆನೇ ಕುದ್ದರೂ ಗುಳಿಂಜನ ಕಡ ಲ್ಲ್ ಕಣ್ಣಿಗೆ ಕಂಡದೆ.

ಈ ನೆಡುಲಿ ಯಶವಂತಂಗೆ ಮೊದ್ವೆ ಆತ್ ಒಂದು ಕೂಸುನೂ ಆತ್, ಮತ್ತೆ ಒಂದು ಪದ್ಯ ಪುಸ್ತಕ ಮಾಡೊನೊಂತ ಯಶವಂತ ನಮ್ಮ ಮನೆಗೆ ಬಾತ್. ಗೌಡ ಸಮ್ಮೇಳನಕ್ಕೆ ಮತ್ತೆ ಹತ್ತೇದಿನ ಒಳದ್. ಬರೀ ಪುಸ್ತಕ ಮಾಡ್ದು ನಮ್ಮ ಕೆಲ್ಸ ಅಲ್ಲ. ಗೈಡ್‌ನ ಮೇಲೆ ಗೈಡ್ ಬರ್‍ಯೊವು ಮುಸ್ತ್ ಜನಗಳೊ. ನಮ್ಮ ಪುಸ್ತಕ ಬೆಲೆಗೊಳುವಂತಡದ್ದಾಗಿರೊಕು. ಮತ್ತೆ ಹೊಸತನ ಇದ್ದ್‌ದ್ ಬೆಲೆ ಕಾಣೊಕು. ನಮ್ಮ ಬಾಸೆನೇ ಒಂದು ಸವಾಲಾಗಿ ಉಟ್ಟು, ಅದನ್ನೂರ್ ಬಳ್ಸೊಕು ಬೆಳ್ಸೊಕು ಈ ಬಗ್ಗೆ ತಿಳ್ದಿವರ್‌ಂದ ನಾವು ಪಡ್ಕಣ್ಕು. ಮೊನ್ನೆ ನಡ್ದ ಗೌಡ ಸಮ್ಮೇಳನಡಲಿ ಪುಸ್ತಕ ಬಿಡುಗಡೆ ಮಾಡೊಕೂಂತ ಕನ್ಸ್ ಕಂಡ ಯಶವಂತನ ಮೈಗೆ ತಡಣ್ಣೀರ್ ಹೊಯ್ದಾಂಗ್ ಆಗಿತ್ತ್. ಆದರೆ ನೆಲೆ ಇಲ್ಲದ ಪುಸ್ತಕ ಮಾಡ್ದೂ ನಂಗೆ ಸಡರಿ ಕಂಡಿತ್ಲೆ. ಸದ್ಯಕ್ಕೆ ಆ ಸಿಂಗೇರಿಸ್ವಾಮಿನ ಕೈಲಿ ಪುಸ್ತಕ ಮೊರ್‍ಯಾದಿ ಕಳ್ಕಂದ್ ತಪ್ಪಿತ್ತ್ ಕೂಡಾ. ಸುಳ್ಯ ಜಾತ್ರೆ ಬಾತ್‌ಂತೇಳಿ ಸಕ್ರೆ ಮಿಠಾಯಿ ತಯರ್ ಮಾಡ್ದಾಂಗೆ ಪುಸ್ತಕ ತಯಾರ್ ಮಾಡೊಕೂಂತಿಲ್ಲೆ.

ಯಶವಂತನ ಪುಸ್ತಕಕ್ಕೆ ಒಂದು ಸಡರಿಯಾದ ನೆಲೆ ಮಾಡೊಕೂಂತೇಳಿ ನಾ

ಕೋಡಿಯವರ ಹಕ್ಕಲೆ ಹೋದೆ. ಅದಕ್ಕೆ ಸರಿಯಾದ ಕಾರಣನೂ ಇತ್ತ್. ನಾವುಗೆ ನಂಗಾರ್ ಸುಕುಮಾರ ಗೌಡ್ರು ಹೇಂಗೆನೋ ಹಾಂಗೆನೇ ಕೋಡಿ ಕುಶಾಲಪ್ಪ ಗೌಡ್ರೂ ಬಾರಿ ದೊಡ್ಡ ಮೊಯಿಂಸ. ನಮ್ಮ ಹೆಚ್ಚಿನವುಕ್ಕೆ ಅವರ ದೊಡ್ಡ ಜುವ್ವ ನೋಡಿ ಮಾತ್ರ ಗೊತ್ತಿರ್ದ್ದೇ ಹೊರತು ಆ ಜುವ್ವದೊಳಗೇನುಟ್ಟೂಂತ ಗೊತ್ತಿಲೆ. ಇಂದ್ ಬಾಸೆ ವಿಜ್ಞಾನದ ಬಗ್ಗೆ ಏನಾರ್ ತೀರ್ಮಾನ ಹೇಳುವ ತಾಕತ್ತ್ ಇರುವವರ ಪೈಕಿಲಿ ಕೋಡಿಯವು ಮಾತ್ರ. ಇದ್ ಕರ್ನಾಟಕನ ಲೆಕ್ಕಲಿ ಇಸಿ ಹೇಳುವ ಮಾತಲ್ಲ. ಈ ಮಾತ್ ಅಂತರಾಷ್ಟ್ರೀಯ ಮಟ್ಟಲಿನೂ ಅಷ್ಟೆ. ನಮ್ಮ ಜಾತಿ ಕೂಟದೊಳಗೆ ಹೇಳ್ದಾದರೆ, ನಂಗಾರ್‌ನವು ಮತ್ತು ಕೋಡಿಯವು ಅಪ್ಪಟ ಚಿನ್ನದ ಗಟ್ಟಿಗಳೇ ಸೈ! ನಾ ನಾಲ್ಕು ಯುನಿವರ್ಸಿಟಿ ಕಂಡ್ ಬಂದಂವ ; ಬಾರೀ ಬಾರಿ ಬುದ್ಧಿವಂತರ ನೋಡಿ ಬಂದಂವ, ಇವು ಇಬ್ಬೊರು ಗೌಡ್ರಾಗಿ ಸಣ್ಣವೂಂತ ಯಾರಿಗಾದ್ರೂ ಕಾಣೊಕಲ್ಲದೆ ಅವರವರ ಕ್ಷೇತ್ರದ ಮಟ್ಟಿಗೆ ಅವರ ಮೀರೊವು ಸದ್ಯಕ್ಕಿಲ್ಲೆ. ಇದ್ ಹೆಚ್ಚಿಗಾರಿಕೆನ ಮಾತಲ್ಲಂತ ಒಳಮನ್ಸ್‌ಲಿ ಹೇಳಿಕಣೆ.

ಕೋಡ್ಯವು ಗೌಡ್ರಿಗೆ ಏನು ಕೊಟ್ಟೊಳೊಂತ ಕೇಳ್ದಕ್ಕಿಂತ, ಅವು ಸಂಪಾದನೆ ಮಾಡ್ದರ ನಾವೆಷ್ಟು ಕಂಡೊಳಾಂತ ಕೇಳೊಕಾದೆ. ಕೊಡಿವರಾಂಗಿದ್ದಂವ ಇನ್ನೊಬ್ಬ ತಯಾರಾಕೂಂತಿದ್ದರೆ ಅದ್ ಈ ತಲೆಮಾರಿಗೆ ಸಾಧ್ಯ ಇಲ್ಲಂತ ಅನ್ಸಿದೆ. ಗೌಡ್ರ ಬಾಸೆ ಬಗ್ಗೆ ಬಾರೀ ಬೇಸಾಯ ಮಾಡ್ಯೊಳಾಂತ ನಾ ತಿಳ್ಕಂಡೊಳೆ. ಗೌಡ್ರ ಬಾಸೆನ ಬಗ್ಗೆ ಇಲ್ದ್ ಸಂಶೋಧನೆ ಮಾಡ್ದವ್ ಅವು ಮಾತ್ರ. ಅದ್ಕೆ ಲಿಪಿನ ಕೊರತೆ ಉಟ್ಟೂಂತ ಮನ್ಸ್‌ಗೆ ಹೋದ ಮೇಲೆ ಅದ್ಕೊಂದು ಲಿಪಿ ಹುಡ್ಕಿಕೊಟ್ಟೊಳೊ. ಅದ್ ಸ್ವತಂತ್ರ ಲಿಪಿ ಅಲ್ಲರೂ ಮಿಶ್ರಲಿಪಿ. ಆದರೆ ಅದ್ ಗೌಡ ಬಾಸೆಗೆ ಮಾತ್ರ ಅಲ್ಲದೆ ಬೇರೆ ಬಾಸಗಳಿಗೂ ಬಳ್ಸಿಕೆ ಆದೇಂತನೂ ತೋರ್ಸಿಕೊಟ್ಟ ವಿಜ್ಞಾನಿ ಕೋಡ್ಯವು. ಅದರ ಒಬ್ಬ ಬ್ರಾಹ್ಮಣ ಬಳ್ಸಕ್, ಕೊಂಕಣಿ, ಕೊಡ್ಗನೂ ಬಳ್ಸಕ್, ಗೌಡ್ರ ಬಾಸೆ ಹುಟ್ಟಿ ಬೆಳ್ದ್ ಎಷ್ಟೋ ವರ್ಸ ಆಗಿರ್ದು, ಆದರೆ ಅವುಕ್ಕೆ ಅದರ ಬರ್ದ್ ತೋರ್ಸಿಕೆ ಸಾಧ್ಯ ಆಗಿತ್ತೆ ನಮ್ಮ ಹಿರಿಯೊವು ಗೈದ್ ತಿಂದ ಜನ, ಮೇಲೆ ಕುದ್ದ್ ತಿಂಬ ಜೆನರ ಕೈಲಿ ಬ್ಯೊಸಿಕಂಡ ಜೆನ. ತನ್ನದೇ ಮಾತ್‌ನ ಕೈಲಿ ಬರ್ಯಕಾಗದಲ್ಲಿ ಸೋತ ಜೆನ. ಯಾಕೆಂತೇಳಿರೆ ಅವುಕ್ಕೆ ಪುರೊಸ್ತ್ ಕೊಟ್ಟಿತ್ತೆ ಆದರೆ ಇಂದ್ ಕೋಡ್ಯವು ಇತಿಹಾಸದ ಲೋಪಕ್ಕೆ ಒಂದು ಪರಿಹಾರ ಹುಡ್ಕುವ ಕೆಲ್ಸ ಮಾಡ್ಯೊಳೊ ಅದೇ ಕಂಡ್‌ಹಿಡ್ದ್ ಉಪಕಾರ ಮಾಡ್ಯೊಳೊ. ಅದರ ಉಳ್ಸುದು ಬೆಳ್ಸುದು ನಮ್ಮವರ ಕೆಲ್ಸಂತ ಹೇಳೊಕಾದೆ.

ದೂರದ ಯುನಿವರ್ಸಿಟಿಂದ ಹೊರಗೆ, ಜಟ್ಟಿಪಳ್ಳದ ಮನೆನ ಪ್ರಯೋಗಶಾಲೆ ಮಾಡಿ ಗೌಡ ಬಾಸೆಗೊಂದು ನೆಲೆ ಕಾಣ್ಸುವ ಕೆಲ್ಸ ಕೋಡಿಯವುರ್‌ಂದ ಆಗುಟು. ಅದ್ ಪ್ರಚಾರಕ್ಕನೇ ಬಾತ್ಲೆ. ಯಾಕೆಂತ ಹೇಳಿರೆ ಅವು ನಾ ಕಂಡ ಹಾಂಗೆ ಒಬ್ಬ ಭಾಷಾವಿಜ್ಞಾನಿ, ಇಲ್ಲರೆ ಚಿಂತಕಂತ ಹೇಳೂಕ್, ಪ್ರಚಾರ ಪ್ರಿಯ ಅಲ್ಲ. ಇತ್ತೀಚೆಗೆ ನಾ ಗೌಡ ಕನ್ನಡದ ಪದಕೋಶ ಮಾಡೊಕೊಂತ ಅವರ ಮಾರ್ಗದರ್ಶನ ಬೇಕೂಂತ ಹೋಕನ ಗೌಡ ಕನ್ನಡ ಲಿಪಿ ತಯಾರ್ ಮಾಡ್ದ ಬಗ್ಗೆ ಗೊತ್ತಾತ್. ಮಡಿಕೇರಿ ಆಕಾಶವಾಣಿಯುವುಕ್ಕೆಂತ ಬರ್ದ್ ಇಸಿದ ಲೇಖನ ತೋರ್ಸಿದೊ, ನಂಗೆ ಆಗಲೇ ಅನ್ಸಿದ್ ಇನ್ನ್ ಮುಂದೆ ಗೌಡ ಕನ್ನಡ ಸಾಹಿತ್ಯ ಬರ್‍ಯೊವುಕ್ಕೆ ಇದೊಂದು ವರದಾನ ಆದೇಂತ. ನಾವು ನಮ್ಮ ಪುಸ್ತಕದ ಕನ್ನಡ (ಗ್ರಂಥ ಲಿಪಿ) ಬಳ್ಸಿ ಗೌಡ್ರ ಬಾಸೆಲಿ ಬರ್ದರೆ, ಹೇಳ್ವಾಂಗೆ ಓದಿಕೆ ಆದೇಲೇ, ಗ್ರೇಸಿದಾಂಗೆ ಬರ್‍ಯೆಕೆನೂ ಆದುಲೆ. ಇಂದ್ ಒಂದು ಎಡವಟ್ಟ್ ಇಲ್ಲಿಗೇ ಮುಗ್ದದೇಂತ ಕುಷಿ ಆಗಿತ್ತ್. ಹಾಂಗೆನೇ ಗೌಡ ಕನ್ನಡ ಪದಕೋಶ ಮಾಡುವ ಬಗ್ಗೆ ಅವು ಸಂತೋಸುಲಿ ಒಪ್ಪಿಗೆ ಸೂಚಿಸಿದ್ದೂ ಆತ್.

**ಯಶವಂತನ ಪುಣ್ಯ :**

ಈ ನಡುವೆ ಯಶವಂತನ ಪದ್ಯ ಪುಸ್ತಕ ಮಾಡ್ವ ವಿಷಯ ಬಾತ್, ಹಾಂಗೇಂತ ಇದ್ದರೆ ಗಡಿಬಿಡಿ ಬೇಡ. ಇನ್ನ್ ಮುಂದೆ ಕೋಡ್ಯವರ ಲಿಪಿಲೇ ಯಶವಂತನ ಪದ್ಯ ಪ್ರಿಂಟಾಕೂಂತೇಳುವ ತೀರ್ಮಾನಕ್ಕೆ ಬಂದೋ೦ ಈ ವಿಷಯ ಬೆಳ್ತ್. ಹೀಂಗಾಗಿ, ಯಶವಂತಂಗೆ ಗೌಡ ಕನ್ನಡ ಲಿಪಿ ಅಭ್ಯಾಸದ ಸುರೂನ ಶಿಷ್ಯವೃತ್ತಿ ಪ್ರಾಪ್ತಿ ಆತ್. ದಿನಕ್ಕೆ ಮೂರು ಗಂಟೆನ ಹಾಂಗೆ ಆರ್ ದಿನ ಯಶವಂತಂಗೆ ಲಿಪಿ ಭೋದನೆ ನಡ್ತ್. ಅವನೇ ಬರ್ದ ಪದ್ಯಂಗಿಲಿ ಅದೆಷ್ಟೊ ಗೌಡ ಕನ್ನಡ ಅಲ್ಲದ ಪದಗಿದ್ದೊ, ಅದರ ಅವನ ಕೈಲೇ ಬದ್‌ಲ್ಸಿದೋ, ಬರೆವ ಕಾಗುಣಿತ ತಿದ್ದಿ ಬರ್ಸಿದೋ ಗೌಡ ಕನ್ನಡಂತಾ ನಾವ್ ನಂಬಿದ್ದ ಕನ್ನಡದ (ಅರೆಕನ್ನಡ) ಗೌಡರ ಕನ್ನಡಕ್ಕೆ ರೂಪಾಂತರಿಸುವ ಕೆಲ್ಸ ನಡ್ತ್. ಇಂದ್ ಯಶವಂತನ ಈ ಪುಸ್ತಕನ ಯಾವ ಸಂಕೋಚನೂ ಇಲ್ಲದೆ 'ಗೌಡ ಕನ್ನಡದ ಕೃತಿ'ಂತ ಹೇಳಿಕೆ ಹೆಮ್ಮೆ ಆದೆ. ಹಾಂಗಾಗಿ ಕೋಡಿಯವು ಲಿಪಿ ಸಿದ್ದಿಸಿಕೊಟ್ಟ ಪುಣ್ಯ ಪುರುಷ ಆದರೆ, ಯಶವಂತ ಅದರ ಪುಣ್ಯ ಪಡ್ಕಂಡ ಸುರೂನ ಕವಿ ಆಗುಟು. ಈ ರಿಕಾರ್ಡ್‌ನ ಮುರ್‍ಯೆಕೆ ಯಾರ್‌ಂದಲೂ ಸಾಧ್ಯ ಇಲ್ಲೇಂತ ಹೇಳೂಕ್. ಬಂಟಮಲೆ ಪ್ರಕಾಶನದ ಈ ಪುಸ್ತಕ ಗೌಡ ಕನ್ನಡದ ಲಿಪಿಲಿ ಬಂದ ಸುರೂನ ಪುಸ್ತಕ.

ಆನ್ಗೋರ್ಜಿ
ಪೊಗ್ಗ ೧

- ಎ. ಕೆ. ಹಿಮಕರ

# ತಿರ್ಗಿನೋಟ್ಲ



ನನ್ನ ಕಾಲೇಜು ದಿನಲಿ, ಒಮ್ಮೆ ನಾ ಬರ್ದ ಸುರೂನ ಗೌಡ ಬಾಸೆನ ಪದ್ಯನ ಬಹುಭಾಷಾ ಕವಿಗೋಷ್ಠಿಲಿ ಓದುವ ಛಾನ್ಸ್ ಸಿಕ್ಕಿತ್ತ್. ಅದು ತುಂಬಿದ ಸಬೆಲಿ ಎಲ್ಲವುಕು ಖುಷಿ ಆಗಿತ್ತ್. ಅಂದುಂದಲೇ ಶಾಕಿರ ಮೇಡಂ, ಕುತ್ಪಾಜೆ ಮಾಸ್ಟ್ರ ಎಲ್ಲವು ಅರೆಭಾಷೆಲಿ ಬರೆಕೆ ಒತ್ತಾಯಿಸಿದ್ದೊ, ನಂತರದ ದಿನಲಿ ಬರ್ದ ಕವನಗಳಿಗೆ ಒಂದು ಸೆರಿಯಾದ ನೆಲೆಂತೇಳಿ ಆದ್ದ್ ಹಿಮಕರಣ್ಣ ಬಂದ ಮೇಲೆ, ಪ್ರಥಮ ಬಾರಿಗೆ ಗೌಡ ಕನ್ನಡದಲಿ 'ತೊಂಬರ' ಹೆಸರ್‌ಲಿ ಬಂಟಮಲೆ ಪ್ರಕಾಶನಲಿ ನನ್ನ ಕವನಗಳ ಸಂಗ್ರಹಗಳಿಗೆ ಬೊಳ್ಪು ತೋರ್ಸಿದೊ. ಅದು ಗೌಡ ಸಮ್ಮೇಳನಲಿ ಬಿಡುಗಡೆ ಆಗಿ, ಮತ್ತೆ 2ನೇ ಮುದ್ರಣನೂ ಆಗಿತ್ತು. ಕೋಡಿ ಅಜ್ಜ ಆದ್ಕೆ ಮುನ್ನುಡಿ ಬರ್ದಿದ್ದೊ. ಅಲ್ಲಿಂದ ಕೋಡಿ ಅಜ್ಜನ ಪರಿಚಯ ಆದ್.

ಭಾಷಶಾಸ್ತ್ರದ ಭೀಷ್ಮ ನಮ್ಮ ಕೋಡಿ ತಾತ (ಪ್ರೊ. ಕೋಡಿ ಕುಶಾಲಪ್ಪಗೌಡ) ನಂಗೆ ತುಂಬಾ ಪ್ರೋತ್ಸಾಹ ಕೊಟ್ಟೊ.

ಅಂದ್‌ಂದ 'ತೊಂಬರ' ಗೌಡ ಕನ್ನಡ ಪೊದ್ಯ ಪುಸ್ತಕ ಆದ ಮೇಲೆ ಇದು ಎರಡನೆ ಕವನ ಸಂಕಲನ, ಇಲ್ಲಿ ಸುಮಾರು 20 ಪದ್ಯಗೊಳ. 'ತೊಂಬರ' ಕ್ಕಿಂತ ಬೇರೆ ರೀತಿಲಿ ಉಟ್ಟು. ಇಂದುನ ಕವನ ಸಂಕಲನಲಿ ನಾ ಒಂದು ಹೊಸ ವಿಷಯನ ಹೇಳಿಕೆ ಸಂತೋಷ ಪಟ್ಟನೆ. ನಮ್ಮ ಭಾಷೆಲಿ ಬರೆಕನ ಆದ ದೊಡ್ಡ ಸಮಸ್ಯೆತೇಳ್ರೆ ವ್ಯಾಕರಣದ ಬಗ್ಗೆ ನಾವು ಬಾಯಿಲಿ ಉಚ್ಚಾರಣೆ ಮಾಡ್ದರ ಬರಹರೂಪಲಿ ಬಾಕನ ಅರ್ಥನೂ ಅನರ್ಥ ಆತ್ತಿತ್ತ್. ಇಂದ್ ಈ ಸಮಸ್ಯೆಗೆ ಪರಿಹಾರ ಬಂದದ್, ಮದ್ರಾಸ್ ಅಣ್ಣಾಮಲೆ ವಿಶ್ವವಿದ್ಯಾಲಯಲಿ ಭಾಷಾ ವಿಜ್ಞಾನಿಯಾಗಿದ್ದ ಭಾಷಾಶಾಸ್ತ್ರದ ಭೀಷ್ಮ ನಮ್ಮ ಕೋಡಿ ಅಜ್ಜ (ಪ್ರೊ. ಕೋಡಿ ಕುಶಾಲಪ್ಪಗೌಡ) ಇವು ಈ ವ್ಯಾಕರಣ ಸಮಸ್ಯೆಗಾಗಿ ಒಂದು ಹೊಸ ಲಿಪಿನ ಕಂಡು ಹಿಡ್ದಳೊ. ಅದರಲ್ಲಿರುವ ಸಂಜ್ಞೆಗಳ ಉಪಯೋಗಿಸಿ ಪ್ರಪಂಚದ ಯಾವ ಭಾಷೆನನು ಓದಿಕೆ ಬರೆಯಕೆನು ಆದೆ. ಇಂದ್ ಈ ಲಿಪಿನ ಆಳವಡಿಸಿಕಂಡ್ ಈ ಕವನ ಸಂಕಲನ ಹೊರಗೆ ಬಾತಾ ಉಟ್ಟು ಇದು ಗೌಡ ಲಿಪಿಲೇ ಬಂದ ಸುರೂನ

ಪುಸ್ತಕಂತ ಹೇಳಿಕಣಕ್. ಈ ಕವನ ಅಚ್ಚ್‌ಗೆ ಹೊವ ವರೆಗೆ ಪ್ರತಿ ಹಂತಲಿ ಕೂಡ ಕೋಡಿಯುವು ಹೆಚ್ಚಿನ ಮುತುವರ್ಜಿ ತಕಂಡ್ ಹಂತ ಹಂತಲಿನೂ ಸರಿ ತಪ್ಪುಗಳ ತಿದ್ದಿ, ಕೆಲವು ಬಳಕೆಲಿರುವ ಸಂಸ್ಕೃತ ಶಬ್ದಗಳ ಗೌಡ ಭಾಷೆಗೆ ಬಟ್ಟಿ ಇಳ್ಸಿಯೊಳ, ಅವರ ಕೃತಿಗಳ ಬಗ್ಗೆ 'ಊರೋಸಗೆ', 'ಬೆಟ್ಟದಾ ಮೇಲೊಂದರ', ನೋಡಿರೆ ಅಲ್ಲೆಲ್ಲ ನಮ್ಮ ಹಳ್ಳಿ ಬದುಕುಸ ನೆಡುಲಿ ಬಾವ ಕುಸಾಲ್‌ನ ವಿಷಯಗಳ ಅಷ್ಟು ನವಿರಾಗಿ ಬಿಂಬಿಸಿದರ ನೋಡ್ರೆ ಅದು 'ಕಾನೂರು ಹೆಗ್ಗಡತಿಗೆ' ಕಮ್ಮೀನಿಲ್ಲೆ. ಭಾಷಾ ವಿಜ್ಞಾನಕ್ಕೆ ಸಂಬಂಧಿಸಿ ಸಂಶೋಧನಾ ಲೇಖನ, ಪ್ರಬಂಧ, ಕವನ (ಮೊಗ್ಗುಮಲರು) ಅದೆಷ್ಟೊ ಕೃತಿಗಳೊಟ್ಟಿಗೆ ಸಾಹಿತ್ಯ ಕೃಷಿ ಮಾಡ್ದ, ಸದಾ ನಿರಾಡಂಬರ ಸರಳ ವ್ಯಕ್ತಿತ್ವ. ಎಂದೂ ಪ್ರಚಾರ ಬಯಸದೆ ಎಲೆ ಮರೆನಕಾಯಿನಾಂಗಿರುವ ಮೇರು ವ್ಯಕ್ತಿ. ನಮ್ಮ ಕೋಡಿ ಅಜ್ಜನೊಟ್ಟಿಗೆ ಒಡನಾಟ ಇಸಿಕೊಂಡದು ನನ್ನ ಪುಣ್ಯ.

ಹಳ್ಳಿಲಿರುವ ಅದೆಷ್ಟೊ ಬರಹಗಾರರಿಗೆ ಪ್ರೋತ್ಸಾಹ ಕೊಟ್ಟುಕಂಡ್ ಬರೆಕೆ ಹೆದ್ರಿ ಹಿಂದೆ ಬಿದ್ದವರ ಬೆನ್ನು ತಟ್ಟಿ ಹುರುಪು ತುಂಬಿಸಿ ಸಮಾಜಲಿ ಅವ್ಕೆ ಸ್ಥಾನಮಾನ ದೊರಕಿಸಿ ಕೊಡುವ ಮಹತ್ಕಾರ್ಯ ಮಾಡ್ತಾ ಇದ್ದು ತಾನು ಸಾಹಿತ್ಯ ಕೃಷಿಲಿ ಅನೇಕ ಕೃತಿಗಳ ರಚಿಸಿ ತಾನು ಬೆಳಿಕು ನನ್ನಟ್ಟಿಗೆ ಇನ್ನೊಬ್ಬರಿಗೆ ಅವಕಾಶ ಮಾಡಿಕೊಡುತ್ತಿರುವ ಇನ್ನೊಂದು ವ್ಯಕ್ತಿತ್ವ ನಮ್ಮ ಹಿಮಕರಣ್ಣ ಇತ್ತೀಚೆಗೆ ಇವರ 'ಕರ್ನಾಟಕದ ಆಯ್ದ ಗ್ರಾಮಾಧ್ಯಯನಗಳು' ಕೃತಿ ಬೀದರ್ ಸಾಹಿತ್ಯ ಸಮ್ಮೇಳನದಲ್ಲಿ ಬಿಡುಗಡೆ ಆಗಿತ್ತ್ ಸಾಹಿತ್ಯಿಕ ವಲಯ ರಾಜಕೀಯಲಿ ಅವಹೇಳನ, ತುಳಿತಕ್ಕೊಳಕಾಗಿ ಗುಡ್ಸಿ ಗುಡ್ಸಿ ಮೂಲೆಗೆ ಸೇರ್ದ ಕುಂಟು ಮಾಯ್ಪುನಂತಾದ ಬರೆಕೆ ಹೆದ್ರುವ ಬರ್ದದರ ಪ್ರಕಟಿಸಿಕೆ ಧೈರ್ಯ ಇಲ್ಲದ ಹಳ್ಳಿ ಮಕ್ಕಳಿಗೆ ಆಶಾಕಿರಣ ನಾಂಗೆ ಬಂಟಮಲೆ ಪ್ರಕಾಶನ ಹುಟ್ಟು ಹಾಕಿ ಅದೇ ಪ್ರಕಾಶನಲಿ ಈ ನನ್ನ ಇನ್ನೊಂದು ಪುಸ್ತಕ ಹೊರ ಬರ್ತಾ ಉಟ್ಟು, ಒಬ್ಬ ಅದ್ಭುತ ಚಿಂತಕ, ತತ್ವ ಶಾಸ್ತ್ರಜ್ಞ ಆದ ಹಿಮಕರಣ್ಣನ ಚಿಂತನೆಗಳೇ ಅದ್ಭುತ. ಒಳ್ಳೆ ಬರಹಗಾರ, ಒಳ್ಳೆ ಆರ್ಟಿಸ್ಟ್ ಡ್ರಮೇಟಿಷ್ಟ್ ಅದೆಷ್ಟೊ ಸಮಾಜಮುಖಿ ಬೀದಿನಾಟಕ ಬರ್ದ್ ಜಾಗ್ರತಿ ಮೂಡ್ಸಿದ ಒಬ್ಬ ಸಮುಸಮಾಜದ ಹರಿಕಾರ, ಇವು ನನ್ನ ಪುಸ್ತಕಕ್ಕೆ ಹೊಸ ಆಯಾಮನ ಕೊಟ್ಟಳೊ ಅದ್ಭುತ ಚಿತ್ರಗಳ ಬುಡ್ಸಿಯಳೊ, ಮುನ್ನುಡಿ ಬರ್ದೊಳ ಇವರ ತುಂಬಾ ನೆನ್ಸಿಕಣೆ.

''ತೊಂಬರ'' ಬಿಡುಗಡೆ ಆದ ಮೇಲೆ ಒಳ್ಳ ಪ್ರತಿಕ್ರಿಯೆ ಬಂದಿತ್ತ್. ಎಷ್ಟೊ ಜನ ಅವರ ಅಭಿಪ್ರಾಯಗಳ ತಿಳ್ಸಿದ್ದ. ನಂಗಾರು ಸುಕುಮಾರ ಗೌಡ್ರ ಒಳ್ಳ ಸಲಹೆ

ಸೂಚನೆ ಕೊಟ್ಟಿದ್ದ ಎಲ್ಲದಕ್ಕು ಗುರುನೆಲೆನಾಂಗೆ ಮುಂದೆನೇ ಪದ್ಯ ಬರಿದ್ದ ಹೊದ್ದೆಟ್ಟಿ ಭವಾನಿಶಂಕರ ಮಾವ, ನಂಗೆ ತುಂಬಾ ಪ್ರಭಾವ ಬೀರಿದ್ದ ಅವರ ತುಂಬಾ ನೆನ್ಸಿಕಣಿ, ನಮ್ಮ ಕುತ್ಪಾಜೆ ಮಾಸ್ಟ್ರಿಗೆ ಪ್ರತಿ ಪದ್ಯ ಬರ್ದಾಂಗೆ ಪೋನ್‌ಲಿ ಓದಿ ಹೇಳ್ತಾ ಇದ್ದೆ. ನಾ ಪದ್ಯ ಬರ್ದದರ ಸುರೂಗೆ ಹೇಳ್ತಿದ್ದದ್ ಅವರೊಟ್ಟಿಗೆ. ಅದರ ದೊಡ್ಡಕಾಡ್‌ನ ಅರ್ರುವ ಕೆಲ್ಸ ಅವು ಮಾಡ್ತಿದ್ದ. ಅವರ ತುಂಬಾ ನೆನ್ಸಿಕಣಕಾದ್ ನನ್ನ ಕರ್ತವ್ಯ. ನನ್ನ ಒಬ್ಬ ಜೋಸ್ತಿ ಉಟ್ಟು ಲಕ್ಷೀಕಾಂತತಂತ. ನನ್ನ ಪದ್ಯಗಳಿಗೆ ರಾಗ ಸೇರ್ಸಿ ಬಾರಿ ಲ್ಯಾಕ್‌ಲಿ ಹೇಳ್ದ. ಅಂವ ಹೇಳ್ದರ ನೊಡಿ ಕುಷೀಲಿ ಸಿಳ್ಳೆ ಹೊಡ್ದ್ ಇನ್ನೊಮ್ಮೆ ಹಾಡೊಕುಂತ ಒತ್ತಾಯ ಮಾಡ್ದರ ಸಭೆ ಒಂದರ್ಲಿ ನೋಡಿ ನಂಗೆ ಖುಷಿ ಆತ್. ನನ್ನ ಹಾಡುಗಳ ಹಳ್ಳಿ ಹಳ್ಳಿ ಸಮಾರಂಭಗಳಲ್ಲಿ ಹಾಡಿ ನಂಗೆ ಅವಂದಳೆ ಪ್ರಚಾರ ಸಿಕ್ಕಿದ್ ತೇಳ್ರೆ ತಪ್ಪಾಕಿಲೆ. ಅವನ ನಾ ನೆನ್ಸಿಕಣೆ. ಅಲ್ಲದೆ ನನ್ನ ಈ ಹಿಂದೆ ನನ್ನ ಪ್ರೋತ್ಸಾಹಿಸಿದ ಎಲ್ಲಾ ದೋಸ್ತಿಗ, ನೆಂಟ್ರುಗ, ಕುಟುಂಬದವ್ರು, ಹಿರಿಯವ್ರು, ಸಣಪ್ಪಂದರ, ನನ್ನೆಲ್ಲಾ ಅಣ್ಣ ತಮ್ಮಂದರಿಗೆ ಎಲ್ಲವ್ಕು ಅಭಾರಿಯಾಗಿ ಒಳೆ. ಕಡೆಯದಾಗಿ ಎಲ್ಲಾ ಕೆಲ್ಸಗಳ ಹಿಂದೆ ಪ್ರತಿಯೊಂದು ಜವಾಬ್ದಾರಿನ ಹೊತ್ತುಕೊಂಡು ಪ್ರೋತ್ಸಾಹಿಸುತ್ತಾ ಬಂದ ನನ್ನ ಹೆಣ್ಣ್ ಜಯ ಮತ್ತೆ ನನ್ನ ಪ್ರೀತಿನ ಮಂಜ ಮಂಜುನಾಥನ ಪ್ರೀತಿನ ಎಂದೂ ಮರೆಕಾದುಲೆ.

ಯಶವಂತ ಐತಾಳ್

# ಗೌಡರು, ಅವರ ಸಂಸ್ಕೃತಿ ಮತ್ತು ಭಾಷೆ

- ಪ್ರೊ. ಕೆ. ಕುಶಾಲಪ್ಪ ಗೌಡ



ದಕ್ಷಿಣ ಕನ್ನಡ ಜಿಲ್ಲೆ ಮತ್ತು ಕೊಡಗು ಜಿಲ್ಲೆಯ ಕೆಲವು ತಾಲೂಕುಗಳಲ್ಲಿ ಗೌಡರು ಬಹುಸಂಖ್ಯೆಯಲ್ಲಿ ವಾಸವಾಗಿದ್ದಾರೆ. ಇವರಿಗೂ, ಮೈಸೂರಿನ ಒಕ್ಕಲಿಗ ಗೌಡರಿಗೂ ಕೆಲ ವಿಷಯದಲ್ಲಿ ಹೊಂದಾಣಿಕೆಯಿದ್ದರೂ ಇವರು ಒಂದೇ ಮೂಲಕ್ಕೆ ಸೇರಿದವರಲ್ಲವೆಂದು ಬಲ್ಲವರು ಹೇಳುತ್ತಾರೆ. ಅವರಿಗೆ ಶೃಂಗೇರಿ ಗುರುಪೀಠ. ಆ ಗುರುಪೀಠದ ಆದೇಶದಂತೆ ತಮ್ಮ ಸಾಮಾಜಿಕ ಕಟ್ಟುಕಟ್ಟಳೆಗಳನ್ನು ರೂಪಿಸಿಕೊಂಡು ಬಾಳುತ್ತಾರೆ. ಇವರು ಈ ಪ್ರದೇಶಕ್ಕೆ ಬಂಗಾಳದಿಂದ ವಲಸೆ ಬಂದವರೆಂದು ಅನೇಕರ ಅಭಿಪ್ರಾಯ. ಇದಕ್ಕೆ ಮುಖ್ಯಕಾರಣ ಬಂಗಾಳಕ್ಕೆ ಪೂರ್ವದಲ್ಲಿ ಗೌಡದೇಶವೆಂದು ಹೆಸರಿದ್ದುದು. ಅಲ್ಲಿ ಕಬ್ಬು ಬೆಳೆದು ಬೆಲ್ಲ ತಯಾರಿಯು ಪ್ರಮುಖ ಉದ್ಯೋಗವಾಗಿದ್ದು, ಗುಡ ಅಂದರೆ ಬೆಲ್ಲ, ಹಾಗಾಗಿ ಗೌಡ ಎಂದು ಬಂತು ಎಂಬ ಅಭಿಪ್ರಾಯವಿದೆ. ಹೀಗೆ ಗುಡ ಎಂದರೆ ಬೆಲ್ಲಕ್ಕೆ ಅನ್ವಯಿಸಿ ಈ ಜನಾಂಗದವರಿಗೆ ಈ ಹೆಸರು ಬಂತೆಂದರೆ, 'ಬೆಲ್ಲವಾಗಿರಬೇಕು. ಬಲ್ಲವರೊಡನೆ' ಎಂಬ ಮಾತಿನಂತೆ ವರ್ತಿಸುವ ಈ ಜನಾಂಗದ ಬಗ್ಗೆ ಸಂತೋಷಪಡಬೇಕು. ಆದರೆ ಈ ನಿಷ್ಪತ್ತಿಗೆ ಗ್ರಂಥಾಧಾರವಾಗಲೀ, ಶಾಸನಾಧಾರವಾಗಲೀ ಏನೂ ಇಲ್ಲ. ಇನ್ನು ನಾನು ಕೇಳಿದ ಒಬ್ಬ ಸಂಸ್ಕೃತ ವಿದ್ವಾಂಸರ ಪ್ರಕಾರ, ಇವರು ಗೋಪಾಲಕ ವೃತ್ತಿಯವರಾಗಿದ್ದು, ಗೋವು+ಆಟ - ಗೋವಟ ಎಂಬುವರಿಂದ ಗೌಡ ಎಂಬ ರೂಪ ಸಿದ್ಧಿಸಿತು ಎಂಬುದು ಎಂದು ಚಾತುರ್ಯದ ಊಹನೆ ಮಾತ್ರವೆನಿಸುತ್ತದೆ.

'ಗೌಡ' ಎಂಬುದು ಒಂದು ಅಧಿಕಾರದ, ಹುದ್ದೆಯ ಹೆಸರು. ಆದುದರಿಂದ ಆ ಸಂತತಿಯವರೇ ಗೌಡರು ಎಂದಾದರು ಎಂಬ ಮಾತು ಸಮಂಜಸವೆನಿಸುತ್ತದೆ. ಶಾಸನಗಳಲ್ಲಿ ಅನೇಕ ಸಲ 'ಗ್ರಾಮವೃದ್ಧ' ಅಂದರೆ ಗ್ರಾಮಕ್ಕೆ ಹಿರಿಯನೆಂಬ ಅಧಿಕಾರಸ್ಥ ಪದ ಕೇಳಿ ಬರುತ್ತದೆ. ಮುಂದೆ ಅದು ಪ್ರಾಕೃತ ರೂಪ ತಾಳಿ ಗಾಮುವಡ್ಡ, ಗಾಮುಂಡ, ಗಾವುಂಡ ಎಂದೆಲ್ಲ ರೂಪಾಂತರ ಹೊಂದಿದ ಪದಗಳೂ ಶಾಸನಗಳಲ್ಲಿ ದೊರೆಯುತ್ತವೆ. ಹಳಗನ್ನಡದಲ್ಲಿ ಬಿಂದು ಸಹಿತವಾದ ಪದಗಳು ಕಾಲಕ್ರಮದಲ್ಲಿ ಬಿಂದು ರಹಿತವಾಗುವ ವ್ಯಾಕರಣ ಪ್ರಕ್ರಿಯೆಯಂತೆ ಇದರಲ್ಲೂ ಬಿಂದು ಲೋಪಗೊಂಡು ಗಾವುಡ ಎಂದಾಗಿ ಮತ್ತೆ ಗವುಡ, ಗೌಡ ಎಂಬ ರೂಪ ತಳೆದಿದೆ. ಈಗಲೂ ಊರೂರುಗಳಲ್ಲಿ ಮದುವೆ, ಸಾವು ಮುಂತಾದ ಸಾಮಾಜಿಕ ಕಾರ್ಯಕ್ರಮಗಳಲ್ಲಿ ನಿಯಂತ್ರಕನಾಗಿರುವ ಪ್ರಧಾನ ವ್ಯಕ್ತಿ 'ಊರು ಗೌಡ' ಎಂಬ

ಗೌರವಕ್ಕೆ ಪಾತ್ರನಾಗುತ್ತಾನೆ. 'ಮಾಗಣೆ ಗೌಡ', 'ಕಟ್ಟೆ ಮನೆ ಗೌಡ' ಎಂಬ ಮೇಲಂತಸ್ತಿನ ಶ್ರೇಣಿಗಳೂ ಇವೆ.

ಈ ಗೌಡರು ಪಿತೃಪ್ರಧಾನ ಕುಟುಂಬ ವ್ಯವಸ್ಥೆಗೆ ಸೇರಿದವರು. ಮೊದಲು ಪ್ರಧಾನವಾದ ಹತ್ತು ಕುಟುಂಬಕ್ಕೆ ಇವರೆಲ್ಲರೂ ಸೇರಿದವರು. ಇವರಲ್ಲಿ ಹದಿನೆಂಟು ಗೋತ್ರಗಳಿವೆ. ಇವೇ ಸಂದಾರ್, ಬಂಗಾರ್, ಹೆಮ್ಮಾನ ಮುಂತಾದ ಹದಿನೆಂಟು ಗೋತ್ರಗಳು. ಹತ್ತು ಕುಟುಂಬವಿದ್ದುದು ಹದಿನೆಂಟು ಗೋತ್ರಗಳಾಗಿ ವಿಸ್ತರಿಸಲು ಕಾರಣ, ಕಾಲಾನುಕ್ರಮದಲ್ಲಿ ಬೇರೆ ಜನರನ್ನೂ ಈ ಜನಾಂಗದೊಳಗೆ ಸೇರಿಸಿಕೊಂಡುದರಿಂದ ಕೆಲವು ಹೊಸಗೋತ್ರಗಳಾಗಿ ಪರಿಗಣಿತವಾದುವು. ಒಂದೇ ಗೋತ್ರದೊಳಗೆ ಮದುವೆಯಾಗು ವಂತಿಲ್ಲ. ಎಡ್ವೋಕೇಟ್ ಜನರಲ್ ಆಗಿದ್ದ, ದಿ| ಎಂ. ಆರ್. ಜನಾರ್ದನರ ಪ್ರಕಾರ ಸುಮಾರು ಹನ್ನೆರಡನೆಯ ಶತಮಾನದ ಸಮಯ ಹೇಮಾವತಿ ನದಿ ತೀರದ ಐಗೂರು ನೆಲಸಿದ್ದ ಇವರು, ಲಿಂಗಾಯ್ತ ಧರ್ಮಕ್ಕೆ ಮತಾಂತರಗೊಳಿಸುವ ಒತ್ತಡಕ್ಕೆ ಒಪ್ಪಿಗೆಯಾಗದೆ, ದಕ್ಷಿಣಕ್ಕೆ ವಲಸೆ ಬಂದರು. ಯಾವ ಕಾರಣವೇ ಆಗಿರಲಿ, ಐಗೂರು ಸೀಮೆ ಇವರ ಮೂಲಸ್ಥಾನವಾಗಿತ್ತೆಂದು ಹೆಚ್ಚು ಮಂದಿ ಒಪ್ಪುತ್ತಾರೆ.

ಇವರಲ್ಲಿ ಕೆಲವು ಪ್ರದೇಶಗಳಿಗೆ ಅನ್ವಯಿಸಿ ಕೆಲವು ಕಟ್ಟೆ ಮನೆಗಳು ಅಂದರೆ ನಾಲ್ಕಂಕಣವಿದ್ದು, ದೊಡ್ಡದಾದ ಅನೇಕ ಸದಸ್ಯರನ್ನು ಹೊಂದಿದ ಮನೆಗಳಿದ್ದುವು. ಇವರಿಗೆ ದೊಡ್ಡ ಹಿಡುವಳಿಯಿದ್ದು ಪ್ರಭಾವಶಾಲಿಗಳಾಗಿ ಅಸುಪಾಸಿನ ತಮ್ಮ ಜನರು ಸಾಮಾಜಿಕ ರೀತಿನೀತಿಗಳನ್ನು ಮೀರದಂತೆ ನಿಯಂತ್ರಿಸುವ ಅಧಿಕಾರ ಹೊಂದಿದ್ದರು. ಶೃಂಗೇರಿ ಮಠದ ಆದೇಶದಂತೆ ಕಟ್ಟೆಮನೆ ಗೌಡರು ಈ ಅಧಿಕಾರ ಹೊಂದಿದ್ದರು. ಹೀಗೆ ದಕ್ಷಿಣಕ್ಕೆ ಬಂದ ಇವರಲ್ಲಿ ಕೆಲವರು ದಕ್ಷಿಣ ಕನ್ನಡದ ಪಶ್ಚಿಮ ಭಾಗಕ್ಕೆ, ಕೆಲವರು ಸುಳ್ಯ ಸಂಪಾಜೆ, ಕೊಡಗಿನ ಕಡೆಗೆ ಹರಿದರು. ದಕ್ಷಿಣ ಕನ್ನಡದ ಪಶ್ಚಿಮ ಪ್ರದೇಶದಲ್ಲಿ ಇತರ ಪ್ರಭಾವಶಾಲಿ ಜನಾಂಗದವರಿದ್ದರು. ಆದುದರಿಂದ ಹೆಚ್ಚಿನವರಿಗೆ ಭೂಮಿ-ಆಸ್ತಿಗಳಿಗೆ ಹೊಂದಲಿಕ್ಕೆ ಸಾಧ್ಯವಾಗದೆ, ಜೀವನೋಪಾಯಕ್ಕಾಗಿ ಉಳ್ಳವರ ಆಶ್ರಯ ಪಡೆದು ಒಕ್ಕಲು ಮಕ್ಕಳಾದರು. ಅಲ್ಲಿಯ ವ್ಯವಹಾರ ಭಾಷೆಯನ್ನೇ ಮಾತೃಭಾಷೆಯನ್ನಾಗಿಸಿಕೊಂಡರು. ಆದರೆ ಅಧಿಕೃತವಾದ ತಮ್ಮ ಜಾತಿಯ ರೀತಿ ರಿವಾಜುಗಳನ್ನು ಬಿಟ್ಟುಕೊಡದೆ ಮುಂದುವರಿಸಿಕೊಂಡು ಬಂದರು. ಇತ್ತ ಪೂರ್ವ ದಿಕ್ಕಿಗೆ ಹರಿದವರು ದಟ್ಟವಾದ ಕಾಡನ್ನು ಸವರಿ, ಗದ್ದೆ ತೋಟಗಳನ್ನು ಮಾಡಿಕೊಂಡು ಭೂಮಾಲಿಕರಾದರು. ಶ್ರೀಮಂತರಾದರು. ಆಸುಪಾಸಿನಲ್ಲಿ ಪ್ರಭಾವಶಾಲಿಗಳಾದರು.

ಗೌಡರು ವೃತ್ತಿಯಲ್ಲಿ ಮೂಲತಃ ಬೇಸಾಯಗಾರರು. ಈಗ ಕೆಲವರು ಬೇರೆ ಬೇರೆ ಉದ್ಯೋಗ ವ್ಯಾಪಾರದಲ್ಲಿ ಉದ್ಯುಕ್ತರಾಗಿದ್ದಾರೆ. ಆದರೂ ಹಲವರಿಗೆ 'ಮಣ್ಣಿನ ಮಕ್ಕಳು' 'ನೇಗಿಲ ಯೋಗಿ'ಗಳೆಂಬ ಬಿರುದು ಸರಿಯಾಗಿ ಒಪ್ಪುತ್ತದೆ. ಕೃಷಿಗೆ ಅನ್ವಯಿಸಿದ ಹಬ್ಬ ಹರಿದಿನಗಳನ್ನು ಆಚರಿಸುತ್ತಾರೆ. ಇವುಗಳಲ್ಲಿ ಪ್ರಾದೇಶಿಕ ವ್ಯತ್ಯಾಸಗಳನ್ನು ಕಾಣುತ್ತೇವೆ.

ಉದಾ: ಕೊಡಗಿನಲ್ಲಿ ಕೃಷಿಕಾರ್ಯಗಳು ಮುಗಿದ ಮೇಲೆ ಕೈಲು ಮುಹೂರ್ತ, ಬೆಳೆ ಕೊಯ್ಲಿಗೆ ಬಂದಾಗ ಹುತ್ತರಿ, ತುಲಾಕಾವೇರಿ ಸಂಕ್ರಮಣವೆಲ್ಲ ವಿಜೃಂಭಣೆಯಿಂದ ನಡೆಯುತ್ತದೆ. ಆದರೆ ದಕ್ಷಿಣ ಕನ್ನಡದಲ್ಲಿ ಇವಿಲ್ಲ, ಹಾಗೆಯೇ ದಕ್ಷಿಣ ಕನ್ನಡದಲ್ಲಿ ನಡೆಯುವ ಬಲೀಂದ್ರ ಹಬ್ಬ ಕೊಡಗಿನಲ್ಲಿಲ್ಲ.

ಬೇಸಾಯಗಾರರಿಗೆ ವಿಶೇಷವಾಗಿ ಸಂಬಂಧಿಸಿದ ಹಬ್ಬವೆಂದರೆ ವಿಷು ಸಂಕ್ರಾಂತಿ. ವರ್ಷದ ಬೇಸಾಯದ ಕೆಲಸಕ್ಕೆ ಶ್ರೀಕಾರ ಬರೆಯುವ ದಿನ. ಎತ್ತುಗಳು, ನೇಗಿಲುನೊಗಗಳನ್ನು ಗದ್ದೆಗೆ ಕೊಂಡುಹೋಗಿ, ನೊಗಕ್ಕೆ ಎತ್ತುಗಳನ್ನು ಕಟ್ಟಿ ಎತ್ತುಗಳಿಗೂ ನೇಗಿಲು ನೊಗಗಳಿಗೂ ಗಂಧದ ಬೊಟ್ಟಿಟ್ಟು ಕೈಮುಗಿದು ಸಾಂಕೇತಿಕವಾಗಿ ಐದು ಹೋಳಿಗಳನ್ನು ಮೂರು ಮೂರು ಬರೆಗಳು ಬರುವಂತೆ ಉತ್ತು, ಎತ್ತುಗಳನ್ನು ಬಿಚ್ಚಿ ಬಿಟ್ಟು, ಮತ್ತೆ ಉತ್ತ ಗೆರೆಯ ಮೇಲೆ ಸ್ವಲ್ಪ ಸ್ವಲ್ಪ ಸೊಪ್ಪು ಗೊಬ್ಬರ ಹಾಕಿ, ಸಂಭ್ರಮದಿಂದ ಮನೆಗೆ ಬಂದು ಹಬ್ಬಕ್ಕೆ ಮಾಡಿದ ವಿಶೇಷ ತಿನಿಸನ್ನು (ಹಿಂದಿನ ಕಾಲದಲ್ಲಿ ಹುಳಿದೋಸೆ), ಎತ್ತುಗಳಿಗೂ ಕೊಟ್ಟು ತಾವು ಸ್ವೀಕರಿಸುತ್ತಾರೆ. ಒಕ್ಕಲುಗಳಾಗಿದ್ದವರು ಕಾಣಿಕೆ ತೆಗೆದುಕೊಂಡು ಬರುತ್ತಾರೆ. ಅದಕ್ಕೆ ನಿಗದಿಯಾದ ಸಂಭಾವನೆಯನ್ನು ಪಡೆಯುತ್ತಾರೆ. - ಹುಳಿ ದೋಸೆಯೊಡನೆ. ಬೆಳಗಾಗುವ ಮೊದಲೇ ಮನೆಯ ದೇವರಕೋಣೆಯಲ್ಲಿ ತಾವು ಬೆಳೆಸಿದ ತರಕಾರಿಗಳನ್ನೂ ಹೂಗಳನ್ನೂ ಇಟ್ಟು ರಾಶಿ ಮಾಡಿರುತ್ತಾರೆ. ಇದಕ್ಕೆ ಬಿಸುಕಣಿಯೆಂದು ಹೆಸರು. ಬೆಳಗ್ಗೆ ಎದ್ದು ಮುಖ ತೊಳೆದು, ಎಲ್ಲರೂ ಕಣಿಯನ್ನು ನೋಡಿ ನಮಸ್ಕರಿಸಿ ಮುಂದಿನ ಕೆಲಸಕ್ಕೆ ಪ್ರಾರಂಭಿಸುತ್ತಾರೆ. ಮಧ್ಯಾಹ್ನಕ್ಕೆ ಈ ಕಾಯಿಪಲ್ಯಗಳ ಸಾರು, ಪಲ್ಯಗಳೊಡನೆ ದೋಸೆ, ಅನ್ನದ ಊಟ ಮುಗಿಸಿ ಸಂತೋಷ ಮತ್ತು ತೃಪ್ತಿ ಪಡುತ್ತಾರೆ. ಕೆಲಸದ ಆಳುಗಳು ಯಜಮಾನರಿಂದ ಭಕ್ಷೀಸುಪಡೆದು ಕಳ್ಳು ಅಥವಾ ಸರಾಯಿ ಕುಡಿದು ಮಜಾ ಮಾಡಲು ಉತ್ಸುಕತೆಯಿಂದ ಹೊರಡುತ್ತಾರೆ. ಮಾಂಸಹಾರಿಗಳಾದ ಇವರು ಕೆಲವೇಳೆ ಮೀನು ಶಿಕಾರಿ ಅಥವಾ ಕಾಡಿನ ಬೇಟೆಗೆ ಹೊರಡುತ್ತಾರೆ

ಬೆಳೆ ಕೊಯ್ಲಿಗೆ ಬರುವ ಸಮಯದ ಸಂಭ್ರಮದ ಹಬ್ಬ ಬಲೀಂದ್ರ ಹಬ್ಬ. ಹಿಂದೆ ಬಲಿಯನ್ನು ವಿಷ್ಣು ಪಾತಾಳಕ್ಕೆ ಕಳುಹಿಸಿದಾಗ ವರ್ಷದಲ್ಲಿ ಮೂರು ದಿನ ಭೂಮಿಗೆ ಬಂದು ತನ್ನ ಪ್ರಜೆಗಳನ್ನು ನೋಡಲು ವರ ಕೇಳಿಕೊಂಡನಂತೆ. ಹಾಗೆ ಬಲಿ ಬರುತ್ತಾನೆಂದು ಅಂಗಳದ ಮೂಲೆಯಲ್ಲಿ ಹಾಲೆ ಮರದ ಕಂಬಗಳನ್ನು ನೆಟ್ಟು ಬಲಿಯನ್ನು ಸ್ಥಾಪಿಸಿ ಅಲಂಕರಿಸಿ, ದೀಪ ಹಚ್ಚಿಟ್ಟು ನೈವೇದ್ಯ ಸಮರ್ಪಿಸಿ ಪೂಜಿಸುತ್ತಾರೆ. ಗೋವುಗಳಿಗೂ ಪೂಜೆ ಸಲ್ಲಿಸುತ್ತಾರೆ.

ಕೆಡ್ಡಾಸ ಎಂಬುದು ಒಂದು ಸಾಮೂಹಿಕ ಬೇಟೆಯ ಹಬ್ಬ. ಕೃಷಿಗೆ ಉಪಟಳ ಕಾರಿಗಳಾದ ಮೃಗಗಳ ನಿಯಂತ್ರಣದ ಉದ್ದೇಶದಿಂದ ಇದು ಆರಂಭವಾಗಿರಬೇಕು. ಫೆಬ್ರವರಿ ತಿಂಗಳ ಮಧ್ಯದ ಸುಮಾರಿಗೆ ಇದು ಬರುತ್ತದೆ. ಈ ಸಮಯದಲ್ಲಿ ಭೂಮಿದೇವಿ ಮುಟ್ಟಾಗುತ್ತಾಳೆ ಎಂಬ ನಂಬಿಕೆಯೂ ಇದ್ದು ಅದಕ್ಕೆ ತಕ್ಕ ಆಚರಣೆಯನ್ನು ಹೆಂಗಸರು ನೆರವೇರಿಸುತ್ತಾರೆ.

ಯಾರಾದರೂ ಹೆತ್ತಾಗಲೂ, ಸತ್ತಾಗಲೂ ಆ ಮನೆಯವರು ೧೬ ದಿನದ ಸೂತಕವನ್ನಾಚರಿಸುತ್ತಾರೆ. ಕುಟುಂಬದವರು ಎಷ್ಟೇ ದೂರದಲ್ಲಿ ನೆಲಸಿರಲಿ ಈ ಸುದ್ದಿ ಸಿಕ್ಕಿದರೆ ಸೂತಕವನ್ನು ಆಚರಿಸಲೇಬೇಕು.

ಹಿಂದೆ ಹೇಳಿದಂತೆ ಪಶ್ಚಿಮದ ಕಡೆ ಹರಿದ ಗೌಡರು ಅಲ್ಲಿಯ ಪ್ರಾದೇಶಿಕ ಭಾಷೆ ತುಳುವನ್ನು ಮಾತೃಭಾಷೆಯಾಗಿ ಸ್ವೀಕರಿಸಿದರು. ಅಮೇರಿಕಾಕ್ಕೆ ವಲಸೆ ಹೋದ ಯುರೋಪಿನ ಜನ ಒಂದೆರೆಡು ತಲೆಮಾರುಗಳು ಕಳೆಯುವಷ್ಟರಲ್ಲಿ ಅಮೇರಿಕನ್ ಇಂಗ್ಲಿಷನ್ನೇ ಮಾತೃಭಾಷೆಯನ್ನಾಗಿ ಮಾಡಿಕೊಂಡಂತೆ ಇವರದೂ ಆಯ್ತು. ಸುಳ್ಯ ತಾಲೂಕು ಹಾಗೂ ಕೊಡಗಿನ ಮಡಿಕೇರಿ ತಾಲೂಕಿನಲ್ಲಿ ನೆಲಸಿದ ಗೌಡರು ತಮ್ಮೊಡನೆ ಬಂದಿದ್ದ ಭಾಷೆಯನ್ನು ಹಾಗೆಯೇ ಬೆಳೆಸಿದರು, ಬಳಸಿದರು. ಆದರೆ ಇದು ಕುಟುಂಬ ವಲಯಕ್ಕೆ ಮಾತ್ರ ಸೀಮಿತವಾಯ್ತು. ಹೊರಗಣ ವ್ಯವಹಾರಕ್ಕೆ ಕನ್ನಡದ ಶಿಷ್ಯರೂಪವನ್ನೇ ಬಳಸಿದರು.

ಆ ಕನ್ನಡಕ್ಕೂ, ಇವರ ಭಾಷೆಗೂ ನಿಕಟ ಸಂಬಂಧವಿದೆಯಾದರೂ, ವ್ಯಾಕರಣ ಪ್ರಕ್ರಿಯೆಗಳಲ್ಲಿ ವ್ಯತ್ಯಾಸಗಳೂ ಇವೆ. ಇದನ್ನು ಕೆಲವರು ಅರೆಬಾಸೆ, ಅರೆಕನ್ನಡ ಎಂದು ಕರೆಯುವುದಿದೆ. ಭಾಷೆಯಲ್ಲಿ ಅರ್ಧ, ಕಾಲು ಎಂದೆಲ್ಲ ಲೆಕ್ಕ ಹಾಕುವುದು ಸರಿಯಲ್ಲ. ಅದರಲ್ಲಿ ಅನ್ಯರ ಕುಚೋದ್ಯದ ಧ್ವನಿಯಿರುವಂತೆನಿಸುತ್ತದೆ. ಇದನ್ನು ಮೊದಲಿಗೆ 'ಗೌಡ ಕನ್ನಡ'ವೆಂದು ಪ್ರೊ. ಮರಿಯಪ್ಪ ಭಟ್ಟರು ಕರೆದರು. ಉಪಭಾಷೆಗಳಿಗೆ ಆ ಭಾಷೆಯನ್ನಾಡುವ ಜನರ ಜಾತಿಯ ಅಂಕಿತದಿಂದ ಕರೆಯುವುದು ವಾಡಿಕೆ. 'ಹವ್ಯಕ ಕನ್ನಡ' 'ಕುರುಂಬ ಕನ್ನಡ' ಎಂಬಂತೆ. ಹಾಗೆ ಮುಂದಿನ ನನ್ನ ಸಂಶೋಧನಾ ಅಧ್ಯಯನದಲ್ಲಿ ಇದೇ ಹೆಸರಿಂದ ನಾನು ಒಂದು ಪುಸ್ತಕವನ್ನು ಅಣ್ಣಾ ಮಲೈ ವಿ.ವಿ. ದಿಂದ ಪ್ರಕಟಿಸಿದೆ. ಇಷ್ಟಾದರೂ ಈ ಹೆಸರು ಇದಕ್ಕೆ ಒಪ್ಪುವುದಿಲ್ಲ. ಕಾರಣ ಗೌಡರಿಗೆ ಕೆಲವರಿಗೆ ತುಳುವೂ ಮಾತೃಭಾಷೆಯಾಗಿರುವುದರಿಂದ ಆದರೆ ಇದಕ್ಕೆ ಬೇರೆ ಪರಿಹಾರವಿಲ್ಲ.

ಗೌ.ಕ.ದಲ್ಲಿ ಶಿಷ್ಟ ಕನ್ನಡಕ್ಕಿಂತ ಹೆಚ್ಚು ಸ್ವರಗಳಿವೆ. ಇದನ್ನು ಉಚ್ಚರಣೆಗನುಸರಿಸಿ ಕನ್ನಡ ಲಿಪಿಯಲ್ಲಿ ತೋರಿಸಲು ಸಾಧ್ಯವಿಲ್ಲ. ಇ, ಉಗಳ ಮಧ್ಯದ /i/ ಎ, ಒಗಳ ಮಧ್ಯದ /ə/ ಎ ಮತ್ತು ಒಗಳಿಗಿಂತ ಕೆಳಗಣ /ɛ/ ಮತ್ತು /ɔ/ ಎಂಬವು ಈ ಹೆಚ್ಚಿನ ಸ್ವರಗಳು. ಗೌಡ ಕನ್ನಡದಲ್ಲಿ ಕತೆಗಳನ್ನೊ, ಕವಿತೆಗಳನ್ನೊ ಬರೆಯುವ ಯುವ ಬರಹಗಾರರು ಕನ್ನಡ ಲಿಪಿಯಲ್ಲಿ ಈ ಧ್ವನಿಗಳ ಸರಿಯಾದ ಉಚ್ಚಾರಣೆಯನ್ನು ಬಿಂಬಿಸಲಾಗದೆ ಕಷ್ಟಪಡುವಂತಾಗುತ್ತದೆ. ವ್ಯಂಜನಗಳಲ್ಲಿ ಈ ತೊಂದರೆಯಿಲ್ಲ. ಕ,ಚ,ಟ,ತ,ಪಗಳು, ಗ,ಜ,ಡ,ದ,ಬಗಳು ಅರ್ಥ ವೈದೃಶಗಳನ್ನು ತೋರುತ್ತವೆ. ಮಹಾಪ್ರಾಣಾಕ್ಷರಗಳು ಇಲ್ಲವೇ ಇಲ್ಲ. ಸ,ಶ,ಷ ಗಳಲ್ಲಿ ಶಷಗಳಿಲ್ಲ. ಹಕಾರವಿದೆ. ಲ,ಳ, ವ್ಯತ್ಯಾಸವೂ ಇದೆ. ರಕಾರವೂ ಇದೆ. ಶಿಷ್ಟ ಕನ್ನಡದ ಅನುನಾಸಿಕಗಳಿಗೆ ಙ ಮತ್ತು ಞ ಗಳು ಅಭದ್ರವಾದರೆ ಗೌ.ಕ.ದಲ್ಲಿ ಅವು ಭದ್ರವಾಗಿವೆ. ಮೇಲೆ ಹೇಳಿದ ವಿಶಿಷ್ಟ ಸ್ವರಗಳಿಗೆ ದೀರ್ಘರೂಪಗಳಿಲ್ಲ.

ಲಿಂಗವಿವಕ್ಷೆಯಲ್ಲಿ ಗೌ.ಕ. ಶಿಷ್ಟ ಕನ್ನಡಕ್ಕಿಂತ ತೀರಾ ಭಿನ್ನವಾಗಿದೆ, ಸರ್ವನಾಮ

ಏಕವಚನದಲ್ಲಿ ಶಿಷ್ಟ ಕನ್ನಡದಲ್ಲಿ ಅವನು, ಅವಳು, ಅದು ಎಂಬ ಪುಲ್ಲಿಂಗ, ಸ್ತ್ರೀಲಿಂಗ ನಪುಂಸಕವೆಂಬ ಮೂರುಭೇದಗಳಿದ್ದರೆ ಗೌ.ಕ. ದಲ್ಲಿ ಅಂವ, ಆದ್ ಎಂಬ ಪುಲ್ಲಿಂಗ ಮತ್ತು ಪುಲ್ಲಿಂಗಗೇತರ ಎಂಬ ಎರಡೇ ಭಾಗಗಳಿವೆ. ಬಹುವಚನದಲ್ಲಿ ಈ ಭೇದವೂ ಇಲ್ಲ. ಅವು ಎಂಬ ಒಂದೇ ರೂಪ, ಮನುಷ್ಯರಿಗೂ ಪ್ರಾಣಿಗಳಿಗೂ ಅನ್ವಯಿಸುತ್ತದೆ. ಪೂರ್ಣ ಕ್ರಿಯಾರೂಪದಲ್ಲಿ ಕರ್ತೃಪದದ ಲಿಂಗ-ವಚನಗಳಿಗೆ ಸಂವಾದಿಯಾದ ಪ್ರತ್ಯಯಗಳು ಬರಬೇಕು. ಗೌ.ಕ. ದಲ್ಲಿ ಏಕವಚನ ನಪುಂಸಕ ಎಲ್ಲ ಲಿಂಗಗಳಿಗೂ ಬರುತ್ತಿದೆ. ಬಹುವಚನದಲ್ಲಿ ಒಂದೇ ರೂಪ ಬರುತ್ತದೆ.

ಉದಾ : ಅಂವ ಬಾತ್ ; ಅದ್ ಬಾತ್ ; ಅವು ಬಂದೊ

ಇಂವ ಬಾತ್ ; ಇದ್ ಬಾತ್ ; ಇವು ಬಂದೊ

ಅಂವ ಬಂದದೆ ; ಅದ್ ಬಂದದೆ ; ಅವು ಬಂದವೆ ;

ಇಂವ ಬಂದದೆ ; ಇದ್ ಬಂದದೆ ; ಇವು ಬಂದವೆ ;

ಪದಗಳ ಸ್ವರೂಪದಲ್ಲಿ ಕೆಲವು ಸ್ವರ-ವ್ಯಂಜನಗಳನ್ನು ಲೋಪಗೊಳಿಸಿ ಚುಟುಕುಗೊಳಿಸುವುದನ್ನು ಗೌ.ಕ.ದಲ್ಲಿ ನೋಡುತ್ತೇವೆ. (ಹೀಗಾಗಿ ಇದರಲ್ಲಿ ಸಂಯುಕ್ತ ವ್ಯಂಜನಗಳ ಸಂಖ್ಯೆ ಹೆಚ್ಚು)

| ಶಿಷ್ಟ ಕನ್ನಡ ರೂಪ | ಗೌ.ಕ. ರೂಪ |
|---|---|
| ನಾನು ಹೋಗುತ್ತೇನೆ | ನಾ ಹೋನೆ |
| ನಾನು ಬರುತ್ತೇನೆ | ನಾ ಬನ್ನೆ |
| ನೀನು ಹೋಗುತ್ತೀ | ನೀ ಹೋದಿಯ |
| ನೀನು ಬರುತ್ತೀ | ನೀ ಬಂದಿಯ |
| ನಾನು ಹೋಗುವೆನು | ನಾ ಹೋವೆ |
| ನಾನು ಬರುವೆನು | ನಾ ಬಾವೆ |
| ನೀನು ಬರುವಿ | ನೀ ಬಾವ |
| ನಾವು ಹೋಗುತ್ತೇವೆ | ನಾವು ಹೋದವೆ |
| ನಾವು ಬರುತ್ತೇವೆ | ನಾವು ಬಂದವೆ |
| ನಾನು ಹೋದೆ | ನಾ ಹೋದೆ |
| ನಾನು ಬಂದೆ | ನಾ ಬಂದೆ |
| ನೀನು ಹೋದಿ | ನೀ ಹೋದ |
| ನೀನು ಬಂದಿ | ನೀ ಬಂದ |
| ನಾವು ಹೋದೆವು | ನಾವು ಹೋದೆ / ನಾವು ಹೋದೊ |

ಹೀಗೆ ಹಲವು ವೈಶಿಷ್ಟ್ಯದಿಂದ ಕೂಡಿದ ಗೌಡ ಕನ್ನಡ ಕನ್ನಡಕ್ಕೆ ಒಂದು ಪ್ರಧಾನ ಉಪಭಾಷೆ. ಇದರ ಲಿಂಗ ಪ್ರತ್ಯಯ ವಿತರಣೆಯನ್ನು ಅಧ್ಯಯನ ಮಾಡಿದ ದ್ರಾವಿಡ

ಭಾಷಾವಿದ್ವಾಂಸರಾದ ನನ್ನ ಮಿತ್ರ ಎಸ್.ವಿ. ಷಣ್ಮುಗಂ ಅವರು ದ್ರಾವಿಡ ಭಾಷೆಗಳಲ್ಲಿ ಗೌಡ ಕನ್ನಡದ ಸ್ಥಾನ, ಉತ್ತರದ್ರಾವಿಡ ವರ್ಗದ ಬ್ರಾಹೂಯಿಯ ಅನಂತರದ್ದಾಗುತ್ತದೆಂದು ಅಂದರೆ ಪ್ರಾಚೀನತೆಯಲ್ಲಿ ಮೂರನೆಯ ಸಾಲಿಗೆ ಸೇರುತ್ತದೆ ಎಂದಿದ್ದಾರೆ. ಹೀಗಿದ್ದು ಇದನ್ನು ಸಾರ್ವಜನಿಕ ಸ್ಥಳದಲ್ಲಿ ಮಾತಾಡಲು ಈ ಜನರು ಹಿಂಜರಿಯುವ ಕಾಲವೂ ಇತ್ತು. ಸುಳ್ಯ ಸರಹದ್ದಿನ ಗೌಡರು ಮೊತ್ತಮೊದಲು ಬ್ರಿಟಿಷರ ವಿರುದ್ಧ ಯುದ್ಧ ಸಾರಿದ ಮುಖಂಡರು. ಮಂಗಳೂರಿನಲ್ಲಿ ಬ್ರಿಟಿಷರನ್ನು ಸೋಲಿಸಿ ೧೩ ದಿನಗಳ ಕಾಲ ಆಡಳಿತ ಮಾಡಿದರು. ಆ ನಂತರ ಬ್ರಿಟಿಷರ ದೊಡ್ಡ ಸೈನ್ಯ ಬಂದು ಇವರನ್ನು ಸೋಲಿಸಿ ಕೆಲವರಿಗೆ ಸೆರೆಮನೆ ವಾಸ, ಕೆಲವರಿಗೆ ಗಲ್ಲು ಶಿಕ್ಷೆ ವಿಧಿಸಿ, ಮುಂದೆ ಇವರಿಗೆ ಸರಕಾರದಿಂದ ಯಾವ ಸವಲತ್ತುಗಳೂ ದೊರೆಯದಂತೆ ಮಾಡಿದರು. ಬೇರೆ ಜಾತಿಗಳವರೂ ತಮ್ಮ ವರ್ಚಸ್ಸನ್ನು ಹೆಚ್ಚಿಸಿಕೊಳ್ಳಲು ಬ್ರಿಟಿಷರ ಹಿಂಬಾಲಕರಾಗಿ ಇವರ ಮೇಲೆ ದಬ್ಬಾಳಿಕೆ ನಡೆಸಿದರು. ಇದರಿಂದ ಹತಾಶರಾದ ಇವರು ಹೆಚ್ಚಿನ ವಿದ್ಯಾಭ್ಯಾಸ, ಪದವಿ ಪರಿಷ್ಕರಣೆಯಿಲ್ಲದೆ ಬಳಲುತ್ತಿದ್ದರು. ಆದರೆ ಈಗ ಚಿತ್ರ ಬದಲಾಗಿದೆ. ವಿದ್ಯಾವಂತರಾಗಿ, ದೊಡ್ಡ ಪದವಿಗಳನ್ನು ಪಡೆದು ಎಲ್ಲ ಕ್ಷೇತ್ರಗಳಲ್ಲೂ ಗೌಡರು ಮುಂದಿದ್ದು ಕೀಳರಿಮೆ ಇಲ್ಲದಾಗಿದೆ. ಈಗ ಇತರರಂತೆ ಸಾರ್ವಜನಿಕವಾಗಿಯೂ ತಮ್ಮವರಲ್ಲಿ ಗೌ.ಕ.ದಲ್ಲಿ ಮಾತಾಡಲು ಹಿಂಜರಿಯುವಂತಿಲ್ಲ. ಆದರೆ ಸುಧಾರಣೆಯೆಂದು ಕೊಂಡು ತಮ್ಮ ಮಕ್ಕಳಲ್ಲಿ ಇಂಗ್ಲಿಷ್ ಅಥವಾ ಶಿಷ್ಟ ಕನ್ನಡದಲ್ಲೆ ವ್ಯವಹರಿಸುವುದೂ ಇದೆ. ಇದೊಂದು ದೊಡ್ಡ ತಪ್ಪು - ಎಷ್ಟೋಕಾಲದಿಂದ ಎಷ್ಟೋ ಜನರ ಪರಿಶ್ರಮದಿಂದ ಸಿದ್ಧವಾಗಿ ಹಿರಿಯರಿಂದ ಬಳುವಳಿಯಾಗಿ ಬಂದ ಈ ಸಂಪತ್ತನ್ನು ತಮ್ಮ ಮಕ್ಕಳಿಂದ ವಂಚಿಸುವುದು ಮಹಾ ಅಪರಾಧವೆಂದು ಮನಗಾಣಬೇಕು.

ಈ ಸುಂದರ ನುಡಿಯ ಮಾದರಿಯನ್ನು ತಿಳಿಯಲು ಒಂದು ಕತೆ ಹೇಳುತ್ತೇನೆ.

ಒಂದು ದಿನ ಒಂದು ಅಜ್ಜಿ ಒಂದು ಮರದ ಅಡಿಲಿ, ನೆಳಲ್‌ಲಿ ಕುದ್ದುಕಂಡ್ ಒಡೆ ಸುಟ್ಟ್‌ಕಂಡ್ ಇತ್ತ್. ಆ ಮರದ ಮೇಲೆ ಒಂದು ಕಕ್ಕೆ ಕುದ್ದ್‌ಕಂಡ್ ಇದರ ನೋಡ್ತಿತ್ತ್. ಅಜ್ಜಿ ಎತ್ತೊಳೋ ನೋಡಿಕಂಡ್ ಇರ್‌ಕನ ಒಂದು ಒಡೆನ ಕಚ್ಚಿ ಕಂಡ್ ಹಾರಿ ಹೋಗಿ ಮರದ ಗೆಲ್ಲ್‌ಲಿ ಕುದ್ದ್ ಕಣ್ತ್. ಒಡೆನ ಪೊರಿಮಳ ಕೇಳಿ ಅಲ್ಲಿಗೊಂದು ಕುದ್ಕ ಬಾತ್. ಮರಲಿ ಒಡೆನ ಕಚ್ಚಿಕಂಡು ಇದ್ದ ಕಕ್ಕೆನ ಕಂಡತ್. ಹೇಂಗರ್ ಮಾಡಿ ಕಕ್ಕೆಂದ ಆ ಒಡೆನ ತಕೊಣುಕೂಂತ ಒಂದು ಉಪಾಯ ಮಾಡ್ತ್. ಕಕ್ಕೆನ ನೋಡಿ ''ಕಾಗಕ್ಕಾ ಕಾಗಕ್ಕಾ ನೀ ಎಷ್ಟ್ ಪೊರ್ಲು ಒಳ ! ಇನ್ನ್ ನಿನ್ನ ಸ್ವರ ಅದೆಷ್ಟ್ ಪೊರ್ಲುಟ್ಟೊ ? ನಂಗೆ ನಿನ್ನ ಹಾಡ್ ಕೇಳಿಕೆ ಆಸೆ ಆದೆ. ಒಂದು ಹಾಡ್ ಹೇಳಿಯನ'' ಎಂದ್ ಕೇಳ್ತ್. ಕಕ್ಕೆಗೆ ಈ ಕುದ್ಕ ಯಾಕೆ ನನ್ನ ಹೊಗ್‌ಳಿದೇಂತ ಗೊತ್ತಾತ್. ಅದ್ ಕೊಕ್ಕ್‌ಲಿದ್ದ ಒಡೆನ ಮೆಲ್ಲ ಅದರ ಕಾಲ್ ಅಡಿಲಿ ಇಸಿ, ಮೆಟ್ಟಿ ನಿತ್ತ್‌ಕಂಡ್, ಕುದ್ಕನ ನೋಡಿ 'ಕಾ ಕಾ'ಂತ ಹೇಳ್ತ್. ಕುದ್ಕನ ಉಪಾಯ ನಡ್ತ್‌ಲೆ. ಅದ್ ನಾಚಿಕೆಲಿ ಮೋರೆ ಅಡಿಗೆ ಹಾಕಿ, ಬೀಲ ಮೊಡ್ಚಿ ಅಲ್ಲಿಂದ ಓಡಿಯೇ ಹೋತು. ಕಕ್ಕೆ ನಿಧಾನಕೆ, ಒಡೆ ತಿಂದ್ ಕಂಡ್ ಇತ್ತ್.

# ಗೌಡ ಕನ್ನಡದ ಧ್ವನಿಗಳ ಬಗ್ಗೆ ಒಂದು ಟಿಪ್ಪಣಿ

**- ಕೆ. ಕುಶಾಲಪ್ಪ ಗೌಡ**

ಈಗ ನವಯುವಕರು ಕನ್ನಡದ ಉಪಭಾಷೆಯಾದ, ಸುಳ್ಯ ತಾಲೂಕು. ಹಾಗೂ ಮಡಿಕೇರಿ ತಾಲೂಕಿನಲ್ಲಿ ಬಹುಸಂಖ್ಯಾತರಾಗಿರುವ ಗೌಡ ಸಮುದಾಯದವರು ಮನೆ ಮಾತಾಗಿ ಬಳಸುವ 'ಗೌಡ ಕನ್ನಡ'ದಲ್ಲಿ ಕವಿತೆ, ಕತೆಗಳನ್ನು ಉತ್ಸಾಹದಿಂದ ಬರೆಯುತ್ತಿದ್ದಾರೆ. ಇದಕ್ಕೆ ಕನ್ನಡ ಲಿಪಿಯನ್ನು ಬಳಸುವಾಗ, ಈ ನುಡಿಯ ಎಲ್ಲ ಧ್ವನಿಗಳನ್ನು ಕನ್ನಡ ಲಿಪಿಯಲ್ಲಿ ತೋರಿಸಲಾಗದೆ ಪೇಚಾಡುವಂತಾಗುತ್ತದೆ. ಸಮೀಪವಾದ ಕನ್ನಡ ಲಿಪಿಯಲ್ಲಿಯೇ ಈ ಕೆಲವು ವಿಶಿಷ್ಟ ಶಬ್ದಗಳನ್ನು ತೋರಿಸಿದರೆ ಅದು ಗೌಡ ಕನ್ನಡದ ನಿಜರೂಪವಾಗಿರದೆ, ಶಿಷ್ಟ ಕನ್ನಡದ ರೂಪವಾಗಿಯೇ ನಿಲ್ಲುತ್ತದೆ. ಹೀಗಾಗಲು ಕಾರಣ, ಗೌಡಕನ್ನಡದ ಧ್ವನಿಗಳು ಕೆಲವು ಶಿಷ್ಟ ಕನ್ನಡಕ್ಕಿಂತ ಭಿನ್ನವಾಗಿವೆ. ಅದೂ, ಸ್ವರಗಳಲ್ಲಿ. ವ್ಯಂಜನಗಳಲ್ಲಿ ಈ ವ್ಯತ್ಯಾಸಗಳಿಲ್ಲ.

**ವ್ಯಂಜನಗಳ ಬಳಕೆಯಲ್ಲಿ,**

೧. ಮಹಾಪ್ರಾಣಾಕ್ಷರಗಳ ಬಳಕೆಯಲ್ಲ. ಅವುಳ್ಳ ಶಿಷ್ಟಕನ್ನಡದ ಪದಗಳಲ್ಲಿ ಬರುವಂಥವೂ ಅಲ್ಪ ಪ್ರಾಣರೂಪದಲ್ಲಿ ಬಳಕೆಯಾಗುತ್ತದೆ. ಉದಾ : ಪಂಥ-ಪಂತ, ಹಠ-ಹಟ, ವಧೆ-ವದೆ, ಉಭಯ-ಉಬಯ ಇತ್ಯಾದಿ.

೨. ಶ, ಷ, ಸ ಎಂಬ ಮೂರು ಪ್ರಭೇದಗಳಿಲ್ಲ. ಸ ಎಂಬುದೊಂದೇ ಬಳಕೆಯಾಗುತ್ತದೆ.

೩. ಯ, ರ, ಲ, ವ, ಹ, ಳ, ಗಳು ಸಹಜ ಬಳಕೆಯಲ್ಲಿವೆ.

ಒಂದು ವೇಳೆ ಮಹಾಪ್ರಾಣಾಕ್ಷರಗಳುಳ್ಳ ಪದಗಳು ಬಂದರೆ ಅದು ಕಲಿತವರ ಮಾತಿನಲ್ಲಿ ಬರುವ ಎರವಲು ಪದಗಳೆಂದು ಪರಿಗಣಿಸಬೇಕು. ಶ, ಷ, ಗಳು ಹಾಗೆಯೆ.

**ಸ್ವರಗಳು :**

ಕನ್ನಡದಲ್ಲಿರುವ ಎಲ್ಲ ಸ್ವರಗಳೂ ಈ ಉಪಭಾಷೆಯಲ್ಲಿವೆ. ಅಲ್ಲದೆ ಈ ಕೆಲವು ಹೆಚ್ಚಿನ ಸ್ವರಗಳೂ ಇವೆ.

೧. ಇ ಮತ್ತು ಉ ಸ್ವರಗಳ ಮಧ್ಯೆ ಒಂದು ಸ್ವರ ಬರುತ್ತದೆ. ಇದನ್ನು ತೋರಿಸಲು ಕನ್ನಡದಲ್ಲಿ ಲಿಪಿ ಸಂಜ್ಞೆಯಿಲ್ಲ. ಆದುದರಿಂದ ಇದನ್ನು ಅಂತರ್ ರಾಷ್ಟ್ರೀಯ ಧ್ವನಿಲಿಪಿಯ ಸಂಜ್ಞೆಯನ್ನುಪಯೋಗಿಸಿ ತೋರಿಸಬೇಕಾಗುತ್ತದೆ. ಇಂಗ್ಲಿಷಿನ i ಅಕ್ಷರದ ನಡುವಿಗೊಂದು ಚಿಕ್ಕ ಅಡ್ಡಗೆರೆಯೆಳೆದು, ಉದಾ ಎಂದು ಇದನ್ನು ತೋರಿಸಲಾಗುತ್ತದೆ. ಉದಾ : ಅಂವ ಬಾತ್ ɨ, ಅಂವ ತಾತ್ ɨ, (= ಅವನು ಬಂದನು, ಅವನು ತಂದನು)

೨.	ಎ ಮತ್ತು ಒ ಸ್ವರಗಳ ಮಧ್ಯೆ ಒಂದು ಸ್ವರ ಗೌ.ಕ. ದಲ್ಲಿ ಬರುತ್ತದೆ. ಇದರ ಉಚ್ಚಾರಣೆ 'ಅ' ಕಾರಕ್ಕೆ ಸಮೀಪವಾಗಿದೆ. ಆದರೆ ಇದು ಆಕಾರದೊಡನೆ ಅರ್ಥವೈದೃಶ (ವಿರೋಧವನ್ನು) ತೋರಿಸುತ್ತದೆ. ಆದುದರಿಂದ ಇದನ್ನು 'ಅ' ಕಾರ ಲಿಪಿಯಿಂದ ತೋರಿಸುವುದು ತಪ್ಪಾಗುತ್ತದೆ. ಹಾಗಾಗಿ ಇದನ್ನೂ ಮೇಲೆ ನೋಡಿದಂತೆ ಬೇರೆಯೇ ಧ್ವನಿ ಸಂಜ್ಞೆಯಿಂದ ತೋರಿಸಬೇಕಾಗುತ್ತದೆ. ಇದನ್ನು ə ಎಂದು ಬರೆಯುವುದು.

ಅಂದರೆ ಇಂಗ್ಲಿಷಿನ e ಎಂಬ ಅಕ್ಷರವನ್ನು ತಿರುಗಿಸಿ ಹಾಕುವುದು.

ಇದು 'ಅ' ದೊಡನೆ ಅರ್ಥ ವಿರೋಧವನ್ನು ತೋರಿಸುವ ಕೆಲವು ಉದಾಹರಣೆಗಳು :

| | |
|---|---|
| ಕರಿ - 'call' | ಕəರಿ - 'charcoal' |
| ಕಡಿ - 'grind' | ಕəಡಿ - 'cut' |
| ಕಂಡ್ 'having seen' | ತಕəಂಡ್ 'having taken' |
| ಕಟ್ಟೆ - 'bund' | ಕəಟ್ಟ್i - 'bind', 'pack' |

ತುಳುಮಾತಾಡುವವರು ಈ ಮಾತನ್ನಾಡುವಲ್ಲಿ ಸರ್ವತ್ರ 'ಅ' ಕಾರ ರೂಪವನ್ನೇ ಬಳಸುತ್ತಾರೆ. ಆದರೆ ಅದು 'ಗೌಡ ಕನ್ನಡ'ದ ಶುದ್ಧರೂಪವಲ್ಲ. əಗೌಡ ಕನ್ನಡದಲ್ಲಿ ತರತರದಿಂದ ಪ್ರಯೋಗಗೊಳ್ಳುವ ಸ್ವರ.

೩.೪.	'ಎ' ಕಾರಕ್ಕಿಂತ ಕೆಳಗಣ ಒಂದು ಸ್ವರವೂ ಒಕಾರಕ್ಕಿಂತ ಕೆಳಗಣ ಒಂದು ಸ್ವರವೂ ಗೌ.ಕ.ದಲ್ಲಿ ಅಸ್ತಿತ್ವದಲ್ಲಿವೆ. ಇವುಗಳ ಪ್ರಯೋಗ ಸಂಖ್ಯಾದೃಷ್ಟಿಯಿಂದ ಕಡಿಮೆಯೆಂದೇ ಹೇಳಬೇಕು' ಆದರೂ ಇವು ಇವೆ. 'ಇ' ಕಾರಕ್ಕಿಂತ ಕೆಳಗಣ ಧ್ವನಿಯನ್ನು ɛ ಎಂದು ತೋರಿಸುವುದು, ಇದು 3 ಎಂಬ ಸಂಖ್ಯೆಯನ್ನು ತಿರುಗಿಸಿ ಹಾಕಿದಂತಿದೆ. 'ಒ' ಕಾರಕ್ಕಿಂತ ಕೆಳಗಣ ಧ್ವನಿಯನ್ನು ɔ ಎಂದು ತೋರಿಸುವುದು, ಇದು ಇಂಗ್ಲಿಷ್‌ನ c ಅಕ್ಷರವನ್ನು ತಲೆಕೆಳಗು ಮಾಡಿದಂತೆ ಕಾಣುತ್ತದೆ. /ɛ/ ಎಂಬುದು /e/ ಯೊಡನೆ ಅರ್ಥ ವಿರೋಧವನ್ನು ತೋರಿಸುವ ಉದಾಹರಣೆ : ಹೆರು 'to give birth', ಹɛರು 'flux' ಹಾಲಿಗೆ ಹೆಪ್ಪು ಹಾಕುವುದು. /ɔ/ ಎಂಬುದನ್ನು ಪದ್ಯಾಂತ್ಯದಲ್ಲಿ ಕಾಣಬಹುದು.

ಬಂದೊɔ = 'ಬಂದರು' ; ಹೋದೊɔ = 'ಹೋದರು'. ಇದ್ದೊɔ = 'ಇದ್ದರು' ಬೇರೆಡೆಗಳಲ್ಲಿ ಕಲಿತವರ ಮಾತಿನಲ್ಲಿ ಕೆಲವು ಶಬ್ದಗಳಲ್ಲಿ ಬರುತ್ತದೆ. ಲಾɔಯರ್, ಕಾɔಲೇಜ್; ಇತ್ಯಾದಿ.

ಭಾಷೆಯ ಉಚ್ಚಾರಣೆಯನ್ನು ಸಾಧ್ಯವಾದ ಮಟ್ಟಿಗೆ ಸರಿಯಾಗಿ ತೋರಿಸಬೇಕೆಂಬ ಉದ್ದೇಶದಿಂದ ಈ ಮಿಶ್ರ ಲಿಪಿಯನ್ನು ಬಳಕೆಗೆ ತಂದರೆ ಉಪಯೋಗವಿದೆಯೊಂದು ನನಗನಿಸುತ್ತದೆ.

ಇವುಗಳನ್ನು ಉತ್ಪಾದಿಸುವ ಬಾಯಲ್ಲಿ ನಾಲಗೆಯ ಸಾಪೇಕ್ಷ ಸ್ಥಾನವನ್ನು ಈ ಕೆಳಗಿನ ರೇಖಾ ಚಿತ್ರದಲ್ಲಿ ತೋರಿಸಲಾಗಿದೆ :




ನಾಲಗೆಯ ತುದಿ ತುಟಿಗಳ ಸಮೀಪವಿದ್ದು, ತುಟಿಗಳು ವಿಸ್ತರಿಸಿದ್ದಾಗ ಉಚ್ಚರಿತವಾಗುವ ಸ್ವರ /i/ (ಇ). ಇದನ್ನು ಬಾಯಿಯ ಪೂರ್ವಭಾಗದಲ್ಲಿ ಉಚ್ಚರಿಸುವುದರಿಂದ ಇದಕ್ಕೆ ಪೂರ್ವ ಸ್ವರವೆಂಬ ಹೆಸರೂ ಇದೆ. /u/ (ಉ) ಇದನ್ನು ಉಚ್ಚರಿಸುವಾಗ ನಾಲಗೆಯ ಹಿಂದಿನ ಭಾಗ ಉನ್ನತ ಸ್ಥಾನದಲ್ಲಿರುತ್ತದೆ. ತುಟಿಗಳು ವೃತ್ತಾಕಾರ ತಾಳುತ್ತವೆ. ಇದು ಬಾಯಿಯ ಹಿಂಭಾಗದಲ್ಲಿ ಉತ್ಪತ್ತಿಯಾಗುವ ಸ್ವರವಾದುದರಿಂದ ಇದಕ್ಕೆ ಪಶ್ಚಸ್ವರವೆಂಬ ಹೆಸರೂ ಇದೆ. /ɨ/ ಇದು ನಾಲಗೆಯ ಮಧ್ಯಭಾಗ ಉನ್ನತನೆಲೆಯಲ್ಲಿದ್ದು, ತುಟಿಗಳು ಹರಡಿದಂತಿದ್ದು ಉಚ್ಚರಿತವಾಗುವ ಸ್ವರ. ಉನ್ನತ-ಮಧ್ಯ ಸ್ವರವೆಂದು ಇದನ್ನು ಗುರುತಿಸಲಾಗುತ್ತದೆ. /ɛ/ ಇದು ನಾಲಗೆಯ ತುದಿ ಅತ್ಯಂತ ಕೆಳಗಿನ ನೆಲೆಯಲ್ಲಿ ಬಾಯಿಯ ಪೂರ್ವ ಭಾಗದಲ್ಲಿ, ತುಟಿಗಳು ಹರಡಿದಂತೆ ಇದ್ದು ಉಚ್ಚಾರವಾಗುತ್ತದೆ. ಇದಕ್ಕೆ ಪೂರ್ವ ನಿಮ್ನ ಸ್ವರವೆಂದು ಹೆಸರು. /ɔ/ ಇದು ಕಡೆ ನಾಲಗೆಯ ಸ್ಥಾನದಲ್ಲಿ ತುಟಿಗಳು ಸ್ವಲ್ಪ ಮಟ್ಟಿಗೆ ವೃತ್ತತೆಗೆ ತಿರುಗಿದಂತಿರುವಾಗ ಉಚ್ಚರಿತವಾಗುವ ಸ್ವರ. ಇದಕ್ಕೆ ಪಶ್ಚ ನಿಮ್ನ ಸ್ವರವೆಂದು ಹೆಸರು. ಇದೇ ರೀತಿ ಸೂಕ್ಷ್ಮವಾಗಿ ನಾಲಗೆಯ ಎತ್ತರ ಮತ್ತು ಸ್ಥಾನವನ್ನನುಸರಿಸಿ ಇನ್ನೂ ಕೆಲವು ಸ್ವರಗಳನ್ನು ಗುರುತಿಸಲು ಸಾಧ್ಯ. ಆದರೆ ಅವುಗಳು 'ಗೌಡ ಕನ್ನಡ'ದಲ್ಲಿ ಉಪಯೋಗಕ್ಕೆ ಬರುವುದಿಲ್ಲ. ಮೇಲೆ ತೋರಿಸಿದ ಸ್ವರಗಳು ಶಿಷ್ಟ ಕನ್ನಡದಲ್ಲಿರುವ ಸ್ವರಗಳಿಗಿಂತ ಹೆಚ್ಚಿನವುಗಳು. ಶಿಷ್ಟ ಕನ್ನಡದ ಸ್ವರಗಳು ಕನ್ನಡ ಬಲ್ಲವರಿಗೆಲ್ಲ ತಿಳಿದವುಗಳೇ ಆದುದರಿಂದ ಅವುಗಳನ್ನು ಇಲ್ಲಿ ವಿವರಿಸಿಲ್ಲ.

# ನೆಂಪು

ಯಾಕೊ ನೆಂಪಾದೆ ಹೈದ
ನಾ ಒಬ್ಬನೇ ಕುದ್ದಿರ್ಕನ
ಪಂಡ್‌ನ ಆ ದಿನಂಗಳ

ಮಸಣಾಗಿ ಹೋವುಟು ಭಾವನೆಗ
ಮಿಸನಾಗಿ ಬುಟ್ಟುಟು ಈ ಬೊದ್ಕ್
ಎಲ್ಲ್ಯುಟ್ಟು ಮೊನ್ಸಂಗೆ ಸಾಂತಿ ಯಾರ ಮೋರೆಲಿ ಉಟ್ಟುಕಾಂತಿ

ಹಳ್ಳದ ನೀರ್‌ಲಿ ಮೀಸಿ ಆಟ ಆಡ್ಡ ದಿನಂಗ ಇನ್ನೆಲ್ಲಿ
ಪೊಯ್ಯೆಲಿ ಮನೆಕಟ್ಟಿ ಜಗಳಾಡ್ಡ ದಿನಂಗೆಲ್ಲಿ
ಮೈತುಂಬ ಕೆಸ್‌ರಾಗಿ ಮನತುಂಬ ಹಸ್ರಾಗಿ
ಕದ್‌ರೊಳಗೆ ಹಾಲಾವ ಕತೆಗ ಮರೆಕಾಗದ
ಇಂದ್‌ನಾ ಯೆತೆಗಾ

ಹೂಡುವ ದೆನಿಯದ್ ಎಲ್ಲಿ
ಕುರ್ಣಿ, ಕೊಚ್ಚಂಗ ಎಲ್ಲಿ
ಚೆರ್ಗ್ ನಿಡ್ಕಣ ಉಬೂರ್ ಎಲ್ಲಿ
ಅದ್‌ರಾದೆ ಉದುರಾದೆ ಒದ್ಕಿ ಬೊದ್ಕ್‌ವ ಬಾಳ್‌ಗೆ
ಉಬೂರತ್ತಿ ಹೋದವೆ ಜನ ಪೇಟೆಗೆ

ಪಗರಾಗಿ ಹಗ್‌ರಾಗಿ ನೊಜ ಎಳಿವ ದಿನಗ
ಸುಗ್ಗಿಲಿ ಹಿಗ್ಗಿ ಮೈಮರಿವ ನೆಗೆಗ
ಏನಿದ್ದರು ಇರ್ತಿತ್ತ್ ನೆಮ್ಮದಿನ ದಿನಗ

ಗಞಿಜಿದಿತ್ಲರು ಹೊಟ್ಟೆಲಿ ನೆಂಜಿಲ್ಲದ ಎದೆಗ
ಆಸೆ ಇತ್ಲರು ಮನ್ಸ್‌ಲಿ ದೂರಾಸಿಲ್ಲದ ಮನ್ಸ್‌ಗ
ಮೈ ಬೊಗ್ಗ್‌ಸಿ ಬೆಗರಸ್ಸ್‌ವ ಕಬ್ಬಿಣದ ಸರ್ರಂಗ
ಎಲ್ಯುಟ್ಟು ಎಲ್ಯೋತು ನಮ್ಮ ಆದಿನಗ
ಏಕೋ ನೆಂಪಾದೆ ನಂಗೆ ಪಂಡ್‌ನ ಆ ದಿನಂಗಳ.



# ನೀರಡಿ ಕೊಟಗೆ

ಮನೆಂತೇಳ್ದ ಮೇಲೆ ಉಗ್ರ್ಾಣನಾಂಗೊಂದು ನೀರಡಿ ಕೊಟೆಗಿರ್ದು
ಕತ್ತಲೆ ಆಕನ ಮನೆವು ಮಾಮೂಲು ಎಲ್ಲವು ಎರ್ಡ್ರೊಣ್ಕ್ ಮಿಯಕಿರ್ದು
ನೀರಡಿ ಕೊಟೆಗೆ ಕೆಲವರ್ದಂತು ದೊಡ್ಡಗೋಡಾನ್‌ನಾಂಗಿರ್ದು

ಕೆಲವರ್ದಂತು ಸೋರಿಕಈಡಿರುವ ಸರ್ಕಸ್ ಟೆಂಟ್‌ನಾಂಗಿರ್ದು
ಕೊಟೆಗ್ಯದ್ ಇದ್ದರೆ ಎಲ್ಲಾ ಕೆಲ್ಸಕೆ ಅನುಕೂಲನುಕೂಡಾಗಿರ್ದು
ಅರ್ಜೆಂಟ್ ನೆಂಟ್ರ್ ಬಂದರೆ ಕೋಳಿನ ಹಜೀರ್ ಮಾಡಿಕೂಬೇಕಾದು
ಲೈಟಿಗೆ ಹೋಗಿ ಪಾಂಜನ ಚೊಲ್ಲಿಕೆ ಬಿಸಿ ಬೂದಿಗೂ ಅದು ಬೇಕಾದು

ಮಾಸನ ತೆಈರಿವ ಕುದೆಂಟಿ ಅಲ್ಲೆ ಮೂಲೆಲಿ ಎಲ್ಲೋ ನೇಲ್ತಿರ್ದು
ಪಕಾಸ್‌ಗೆ ತೂಗಿದ ಬೆದ್‌ರ್‌ನ ನೇಕೆಲಿ ಕಈತ್ತಿಗ ಸಾಲಾಗಿ ನೇಲ್ತಿರ್ದು
ಮೂಲೆಲಿ ನೋಡಿ ಹಲ್ಸಿನ ಹಣ್ಣ್‌ಲಿ ಉಮ್ಮ್ರಣೆ ಜಯ್‌ಂತ ಹಾರ್ತಿರ್ದು
ಅಟ್ಟದಸೆರೆಲಿ ಕೋಲಿಗೆ ಸುತ್ತಿದ ಹಲ್ಸಿನ ಮಾಯ್ಣದ ಉಂಡೆ ಇರ್ದು

ಚೆಂಟೆನ ಕರೆಲಿ ಮಡ್ಕೆಲಿನೋಡಿ ಉಮಿಕಈರಿ ಉಪ್ಪುನ ಹೊಡಿ ಇರ್ದು
ಅಲ್ಲೆ ಹಕ್ಕಲೆ ನೆರ್ಕೆಲಿ ಚುರ್ಕಂಡ್ ಅಜ್ಜನ ಕಾಯ್ಚೆಪ್ಪು ಕುಟ್ಟೆ ಇರ್ದು
ಅಟ್ಟಲಿ ಎಲ್ಲ ಹೊಗೆಗದ್ ಒಳ್‌ಂಗಿದ ಕೊಪ್ರಿ ಕಾಯಿಗ ತುಂಬಿರ್ದ್
ಒಳೆಗೆದ್ ಯಾಗೊಳು ಕಿಚಿಕಿಚಿ ತೇಳುವ ಎಲಿಗಳ ಸಂತಾನ ತುಂಬಿರ್ದು
ನೆರ್ಕೆಲಿ ನೋಡಿ ತೋರಣದಾಂಗೆ ಜೋಂಗ್‌ಲಿ ಕಾಚಂಗ ಒಳ್‌ಂಗಿರ್ದು
ತಿರ್‌ಂಟಿದ ಹೊಸೆಪುನ ಹಾಂಗೆದ್ ಕೆಲವು ವಾಲಿಬಾಲ್ ನೆಟ್‌ನ ಹಾಂಗಿರ್ದು
ಮೂಲೆಲಿ ಒಂದು ಪಕಾಸ್‌ಲೊಂದು ಬೆದ್‌ರ್‌ನ ಗುತ್ತಿ ನೇಲ್ತಿರ್ದು
ಪಂಡೆ ತುಂಬಿಸಿದ ಮುಜೆಂಟಿ ಒಕ್ಕ್‌ಲ್ ತಲೆಗೆನೆ ಹಾರಿ ಬಾತಿರ್ದು
ಒಲೆನಾ ಒಳಗೆ ಬೊಗ್ಯದ್ ಹಗಲು ಮಾಮೂಲು ಗೊರ್ಕೆ ಹೊಡಿತಿರ್ದು
ಮೊಡ್ಡಿನ ಬೇಸಿಕೆ ಸರಾಯ ಕಾಸಿಕೆ ಒಲೆಯೊಂದು ಸಣ್ಣದು ಹಕ್ಕಲೆರ್ದು
ಮೊಣ್ಣುನ ಮಡ್ಕೆ ಸುಣ್ಣದ ಮಡ್ಕೆ ಉಪ್ಪುನ ಕೊಮ್ಮೆ ಅಲ್ಲಿರ್ದು

ಉಮ್ಮ್ರಣಿ ಹಾರುವ ನೀರಡ್ಕೆ ಮಂಡೆ ಅಲ್ಲಿ ಮೂಕ್‌ಗೆ ಚೋಂಕ್ರ ಹೊಡಿತಿರ್ದು
ಒಳ್‌ಂಗಿಕೆ ಹಾಕಿದ ಹಣ್ಣಡ್ಕೆ ಒಣ್‌ಗದೆ ತಲೆಗೇ ನೀರ್ ಅರಿತಿರ್ದು
ಅಪ್ರೂಪಕೆ ಭಾವ ಮಾವನ ಮಗಳ ಕೋಸಿದ್ ಹಿಡೆಕೆ ಜಾಗುಟ್ಟು.
ಕೂಳಿ ಕೂಂಜೋಳು ಯಾಪೆಗ ಬಲೆಗ ಗಳುಗಳ್ಲೆಲ್ಲ ನೇಲ್ತಿರ್ದು
ಮೊಣ್ಣುನ ಉಜ್ಜಿದ ಹಲ್ಸಿನಕ್ಕಿ ರಾಸಿ ಮೂಲೆಲಿ ಪರ್ವತದಾಂಗಿರ್ದು
ಕಾಪದ್ ತಲೆಗೆ ತಾಂಗಿರೆ ಹೇಂಟೆ ಕೊರೇಂ ಕೊರೇಂ ತೇಳ್ತಿರ್ದು
ಗಡಿ ಬಿಡಿಲೋಡಿ ದೊಡದೊಡತೇಳಿ ಉಚ್ಚೆನು ಹೊಯಕೆ ಆತಿರ್ದು
ತೊಡೆ ಸಂದ್ ತೊರ್ಸಿಕಂಡ್ ಬಿಸಿನೀರು ಹ್ಯೊಕಂಡು ಪದ್ಯಹೇಳಿ ಹೈದ ಮೀತಿರ್ದು

ಮೊದ್ದರಿವಕಱಲ್‌ಱ ರಾಗಿಕಱಲ್ ಒಣ್ಕೆಗ ನೆಗುರ್ಳಿ ಅಲ್ಲಿರ್ದು
ಮಳಕ್ಯೋಲ್ ಕಱಡ್ಡಿ ಗಾಳದ ಸೆಳೆಗ ಸೆರೆಸೆರೆ ಎಲ್ಲ ಸೆಕ್ಕ್ಯಸಿರ್ದು
ಕೆಂಪು ಕೋಮಣಗ ತುಂಡು ಬೈರಾಸ್‌ಗ ಅಲ್ಲೇ ಚೊಡ್‌ಂಕ್‌ನೇಲ್ತಿರ್ದು
ಕಳಸೋಂತೆಕಾಯಿಗ ಬಾಡ್ಸಿದ ಮಡ್‌ಲ್ಲಿ ಅಣ್ಸ್ಣ ಆಗಿ ಪೊರ್ಲಿರ್ದು

ಕೆಬಿಗಾಕಿ ಆಗಾಗ ಆಹಾ ತೇಳಿಕೆ ಕೋಳಿಗಱರಿ ಎಲ್ಯಾರ್ ಅಲ್ಲೇ ಚುರ್ದಿರ್ದು
ಬಜಲಿ ಎಳಿವ ನೊಂಜ ನೇಗ್‌ಲ್‌ಗ ಅಲ್ಲೇ ಎಲ್ಯಾರ್ ನೇಲ್ತಿರ್ದು
ಕೆಂಪನ ಚೆರ್ಮಗ ಕಾಡ್ಯೋಳಿ ಮಾಲೆ ಹೊಳ್ಕೆತಲೆ ಮೊದ್ದ್‌ಗೆ ಒಣ್ಗಿರ್ದು
ಅರ್‌ಂಟಿದ್ ನೋಡಿರೆ ಕೋಟೆಗೆನೆ ಒಂದು ಮ್ಯೂಸಿಯಂ ನಾಂಗೆ ಕಂಡಿತ್ತು
ಇಂದದು ನೋಡಿಕೆ ಎಲ್ಯುಟ್ಟು ಇದೆಲ್ಲ ಆಗುಟು ಹೊತ್ಯೋಗಿ ಚೂಟ್ಮ್ರಣ್ಣು
ದಂಬೆಗ ಪಾತಿಗ ಕುಂಬಾಗಿ ಇಟ್ಯೊಳ ಅಲ್ಲಲ್ಲಿ ಪಿ.ವಿ.ಸಿ. ಪೈಪಾಗ್‌ಟ್ಟು

ತಿರ್ಗಿಸಿರೆ ಬಿದ್ದದೆ ಮೈಮೇಲೆ ನೀರ್ ನರ್‌ವೊಳು ಬೊಸ್ಮ್ರಕೆ vim ಆವ್ಟು
ಬೊದ್ಕುವ ದಾರಿಗ ಬದಲಾಗಿ ಹೋಕನ ಹಳೆದಾರಿಲಿ ಹೋಂವ ಯಾರುಟ್ಟು
ಸುಲ್ಬದ ದಾರಿಗ ಎಷ್ಟೊ ಇರ್ಕನ ಹೆಜ್ಜೆನು ಮಾಸಿ ಹೋಗ್ತುಟ್ಟು.

# ಅಪ್ರೂಪದ ನೆಂಟ ಬಾವ

ಅಕ್ಕನ ಮನೆಗೆ ತಮ್ಮವ ಹೋಕನ ಮಧ್ಯಾಹ್ನ ಕಳ್ದಿತ್ತ್
ಎದುರ್‌ನ ಬಾಗ್ಲ್‌ಗ್ ಒಳಗೆನ ಪುಡೆಂದ ತಾಳನು ಹಾಕಿತ್ತ್
ಪರ್‌ಂಗ್ಯೆದ್ ಹಿಡ್ದ ನಾಯದ್ ಹೆಡೆಗೆಲಿ ಬರಬರ ಕೆರೆತಿತ್ತ್
ಹಿಂದೆನ ಬಾಗ್ಲೂ ಅಂಡಿಸಿ ಮೇಲೆಗೆ ಸಂಕಲೆ ಕೋಸಿತ್ತ್

ಅಂದ್ ಮನೆಲ್ಯದ್ ಯಾರಿದ್ದ ತಿಂಡಿ ಕಟ್ಟ್‌ನು ಕೈಲಿತ್ತ್
ಸೊಪ್ಪುನ ಗುಡ್ಡೆಗೆ ಮಕ್ಕವು ಯಾರೋ ಸುದ್ದಿನು ಮುಡ್ಸ್ಯತ್
ಮೈಕೈ ಬೆಗರಿದ್ ಕಿಂಕ್ರಿಕೆ ಪದ್‌ನಿದ್ ಅಕ್ಕನೂ ಓಡಿಬಾತ್
ತಲೆಲಿ ಮೊಡ್ಪಾಳೆ ಹಾಂಗಿತ್ತ್ ಹರಿ ಕತ್ತಿನು ಕೈಲಿತ್ತ್
ನೀರ್‌ನ ಕೊಟ್ಟ್ ನೀರುಳಿ ಕೊಚ್ಚ್‌ಕನ ಸಕ್ಕರೆ ಮುಗ್ದಿತ್ತ್

ಪಕ್ಕದ ಮನೆಂದ ಸೆರ್‌ಂಗ್‌ಲಿ ಮುಚ್ಚಿಕಂಡ್ ಎಂತದೋ ಓಡಿತಾತ್
ಕುಡೆಕೆ ಸರ್ಬತ್ ಮಾಡ್ಯಾತ್
ದೂರದ ಊರುಂದ ಬಂದುಟುನಂಟ ಅಪ್ರೂಪಕೊಮ್ಮೆ ಅಂವಯಾ
ಎಡೇಲಿ ಬಂದದ್ ಬಾವದ್ ಮಲೆಗೆ ಕಟ್ಟ್‌ಅದ್ ಕಟ್ಟ್‌ಕನ
ಆದ್ಯ್‌ನ ಕರೆಲಿ ಬೆದ್ಯ್‌ನ ಹಿಂಡ್ಲ್‌ಲಿ ಮುಳ್ಳುನ ಹೆರೆತಿದ್ದ ಬಾವ
ಮುಳ್ಳುನು ಹರ್ದದೆ ಚೆವುಳಿನು ಕಚ್ಚಿದೆ ಉರುಂಬಿರು ಬುಟ್ಟವೆನಾ
ಸುದ್ಯದ್ ಮುಟ್ಟಿದ್ ಗಡಿಬಿಡಿಲಿಳೆಕನ ಕಳಿಂಜ್ಯದ್ ಕೋಸ್ಯಾತ್
ಉಟ್ಟ ತೋರ್ತದ್ ಹಿಂಡ್ಲ್‌ಲಿ ಕೋಸಿಕೊಂಡ್ ಚೆಡ್ಡಿಲಿ ಓಡಿಬಂದೊ
ತಲೆಲಿ ಸೊಪ್ಪುನ ಹೊರೆ ಇತ್ತ್

ಕತ್ತಿನ ಮೊಚ್ಚಿನ ಚುಡೊಂಕು ನೆಲ್ಲ ನೇಕೆಲಿ ಕೋಸಿಸಿದ
ಬಾವನ ಕೋಲಕೆ ಅಕ್ಕಮಕ್ಕ ಎಲ್ಲವು ನೆಗೆ ಆಡ್ದೊ
ನಂಗೆ ಇನ್ನೇನು ಆಕುತೇಳ್ದ ನಾ ಅಜ್ಜಲ್ಲನೇ ತೇಳ್ದೊ
ಏನ್‌ಯ ಬಾವ ಸೌಖ್ಯ ಮನೆಲಿ ನೆಂಟನನೂ ಕೇಳ್ದೊ

ಅಷ್ಟೊತ್ತಾತ್ತಕನ ಅಡ್ಗೊಳಿಗೆಂದ ಅಕ್ಕದ್ ಕರೆತಿತ್ತ್
ಹೌದಯ ಇತ್ತೊತ್ತಮ್ಮೆ ಬನ್ನೀಂತೇಳಿ ಗುಟ್ಟುಲಿ ಮಾತಾಡ್ತ್
ಗೂಟಕೆ ಕಱಟ್ಟಿದ ಕಟ್ಟದ ಹೂಂಜ ಮನೆ ಹಿಂದೆ ಹೊಣ್ಕ್ತಿತ್ತ್
ತೊಪ್ಪುಳು ಕಱರಿಂಚಿದ್ ನೀರಡಿ ಕೊಟೆಗೆಂದ ಕಱರ್‌ಂಟದ್‌ಬಾತಿತ್ತ್
ಅಕ್ಕಾ ನೀರ್ದ್ದೋಸೆ ಹ್ಯೊತಿತ್ತ್

ಹೋಗೇ ಹೋಕು ಪರ್‌ಂಚುವ ಮನೆಲಿ ನಿಲ್ಲುದ್ಲೆ ತೇಳ್ತಿತ್ತ್
ಪೊರ್ಮಳ ಮೂಕ್‌ಗೆ ಹೊಡ್ಡದೆ ಕೊಟ್ಟ ಕಂಬಾಯಿ ಉಟ್ಟು ಱಣ್ತ್
ಬೊಳ್ಪುನ ಬಸ್ ಯಾಗಂತಕೇಳ್ತ್ ಬೇಗೋಕುಂತೇಳ್ತಿತ್ತ್
ಕತ್ತಲೆಗುಂಬಕನ ಕೊತ್ಯದ್ ಬಂದ್ ಕಾಲ್‌ಗೆ ಒರ್ಸ್ತಿತ್ತ್
ಎಲ್ಲಿಂದ ಗೊತ್ತಿಲೆ ಕುಪ್ಯೊಂದ್ ತಂದ ಬಾವಂಗೆ ಮಾಮೂಲಾತ್
ಮುಕುಳಿಯೇ ನುಂಗಿದ್ ಬೀಜಣ್ಣ್ ಸರಾಯ ನಂಟಂಗೆ ಮುರ್ಕಾತ್
ಒಳಗೆ ಅಕ್ಕದ್ ಪರ್‌ಂಚ್‌ತಿತ್ತ್

ಉಂಡೂ ಆತ್ ಗುಂಡೂ ಆತ್ ತುಂಡು ಕಱಡ್ಡಿ ಹಲ್ಲ್‌ಗೋತ್
ಎಲೇಡ್ಕೆ ತುಂಬಿಸಿ ಎಡೆ ಎಡೆ ಕಾಂಕರ್ಸಿ ಜಾಲ್‌ಗೆ ಉಗೆಕಾತ್
ಬಾವನ ಹರಿಕತೆ ಸುರು ಆತ್ ಅಕ್ಕನ ಬೈಗಳುನೂ ಆತ್
ಹನ್ನೆರಡಾತ್ ಬಿರ್ಕಂಡ್ ಬಾತ್ ನಿದ್ದೆನು ತೂಗ್ಯಾತ್
ಕಾಪ್ಯದ್ ಕುಡ್ಡ್ ಬೊಳ್ಪುಗೆ ಎದ್ದ್ ನೆಂಟಂಗೂ ಹೊರ್‍ಟಾತ್
ತೌರುಮನೆಗೆ ತರ್ಕಾರಿ ಕಱಟ್ಟು ಅಕ್ಕಂದ್ ರೆಡಿ ಆತ್
ಹರಿವಾಣಲಿಸಿದ ಕಾಗದ ಕೊಟ್ಟು ದಿನ ಮುಂದೆ ನೀವುಂತ
ಬೊಗ್ಗಿ ಕಾಲು ಹಿಡ್ಕ್ಯೆಂತ ನನ್ನ ಮೊದುವೆಗೆ ಬರೊಕುಂತ
ಬನ್ನೇಂತೇಳಿ ಮೆಟ್ಟು ಕಱಲ್ಲಿಳ್ದ್ ಆಚೀಚೆ ಹುಡ್ಕೆಂತ್
ಚೆಣೆಲೇ ಇಸಿದ ಹೊಸಜೋಡಿಲ್ಲೆ ಒಂದದ್ ಎಲ್ಯೋತ್
ಹೆಡೆಗೆಲಿ ಕುದ್ದುದ್ ಮೊರಿನಾಯಗ್ದದೆ ಬಾರನುನು ಹೋಗಿತ್ತ್.

# ನಾ ಒಪ್ಪಿದ ಗೂಡೆ

ಮನ್ಸಾವ್ಪು ಯಾರ್ದ್iಂತ ಅದು ನಂಗೆ ಗೊತ್ಲೆ
ಮನ್ಸುಟ್ಟೊ ನನಮೇಲೆ ಅಂತನೂ ಕೇಳ್ತ್ಲೆ

ರೂಪಲ್ಯದು ಕಿಮ್ಮಿತ್ಲೆ ಹಣ್ಣ್i ಜಮುನೇರ್ಲೆ
ನಾಚಿಕೆನು ಆಗಿತ್ತ್ ನೋಟ ನೋಡ್ದರ್ಲೆ

ತಡ್ಕಂಣ್ಕೆ ಮನ್ಸೊಳಗೆ ಬೊತ್ತದಾಗದನೆ
ಕೇಳ್ದೆನಾ ಕೈ ಹಿಡ್ದ್ ಏನು ಗೂಡೆಂತನೆ

ನಾಚಿಕೆಲಿ ನೆಲ ನೋಡಿ ಕೇರ್ತಿತ್ತ್ ಕಾಲ್ದ್iಲಿ
ಹಾವ್ನಾಂಗೆ ನೇಲ್ತಿತ್ತ್ ಜಡೆ ಎರ್ಡ್ ಬೆನ್ನ್iಲಿ

ಬಾರಿ ಬೆರ್ಗ್iಲಿ ನೋಡ್ದೆ ಅದರ ಪೊರ್ಲುನನೆ
ಬೆರ್ಜಣೆನ ಅಳ್ಗೆಲ್iನ ಕೂಡಿತ್ತ್ ಸಣ್ಣನೆಗೆ

ನೋಡಿತ್ತ್ ಹಣ್ಣ್ ಹೊತ್ತ್ ನನ್ನ ಮೋರೆನನೆ
ನೆಗೆನು ಅಳ್ಗೆಲು ಇತ್ತು ಸಣ್ಣಕ್ಕೆ ಮೋರೆಲೆ

ಕೇಳ್ದೆಂತ್ ನನಮೇಲೆ ಸಿಟ್ಟಾ ಹೇಂಗೆನೆ
ಸಿಟ್ಟಿಲ್ಲೆ ಗೂಡೆಗಳ ನಾಟಕದ್iತಾನೆ

ನಾಚಿಕೆಲಿ ಸೆರ್ಂಗೆಳ್ದ್ ಹೇಳ್ಕನನೆ ತಾನೆ
ನೋಡಿದ್ದೆ ದಾಳಿಂಬೆ ನಾಂಗಿದ್ದ ಹಲ್ಲ್iನೆ

ಒಪ್ಯಳರಿ ನೀವ್ನನ್ನ ಮರೆಕೆ ಬೊತ್ತ್ಂತನೆ
ಬಾಯ್ಬುಟ್ಟು ಹೇಳ್ದೆ 'ಎಲ್ಯಾರು ಉಟ್ಟನೆ'
ಮೊದುವ್ಯಾದುತಿದ್ದರೆ ನಿನ್ನನೇ ನಾನೆ.

೬೮

ಎಲ್ಲೊ ಇಲ್ಲೆಯಾ ಕೀರನ ಹುಡ್ಕಿರೆ
ಕಳಿಳ್ಳ್ ಸರಾಯನ ಗುತ್ತಿಗೆನೊಳಗೆ
ದುಡ್ಡ್‌ನುನೂರು ತಕಂಡು ಹೋಗುಟು
ಪತ್ತೆನೆ ಇಲ್ಲೆಯ ಇಷ್ಟರವರೆಗೆ

ಮಳೆನೂ ಬುಟ್ಟುಟು ಬಿಸ್ಲೂ ಬಂದುಟು
ಮೊದ್ದುನು ಬುಟತ್ಲೆ ಈವರೆಗೆ
ಸುಣ್ಣನ ಕರ್‌ಂಡಿದ್ ಮೊದ್ದುನ ಬೆರ್ಸಿದ್
ರೆಡಿ ಮಾಡ್ಯಾಗುಟು ಡ್ರಮ್ಮೊಳೆಗೆ

ಬೊಳ್ಪನ ಕಾಪಿಗೆ ಪುಂಡಿನು ಆಗುಟು
ಸಾರಿಗೆ ಒಳ್‌ಂಗಿಲ್ ಮೀನುನು ಬಿದ್ದುಟು
ಬಂದೇ ಬನ್ನೆಂತ ಅಷ್ಟಲ್ಲದೆ ಹೇಳಿದ್i
ಮೊದ್ದುನು ರೆಡಿಮಾಡಿಂತನುಯಾ

ಕಮ್ಮ್ರಗೆಚಾಳೆಗೆ ಹತ್ತೊವು ಕೂಡ
ಬೇರೆವು ಇದ್ದರೂ ಊರೊಳೆಗೆ
ಪಾಂಜನ ಹಾಂಗೆ ಹತ್ತುದು ಅಂವಯಾ
ದಂಬೆಗೂ ಕೊಟ್ಟೆಗೂ ಕೊಡಿಗೆಲ್ಲ

ಹೋದರೆ ಹೋದರೆ ಸುಳ್ಯಕ್ಕೆ ಮಾತ್ರ
ತೊಪ್ಪಿರೆ ಹೆಣ್ಣ್‌ನ ಮನಗ್ಯದು ಮಾತ್ರ
ಒಂದೋ ಗಡ್ಡನ ತೆಗೆಕಿರ್ದು
ಅಲ್ಲಾರೆ ಹೆಣ್ಣ್iನ ಮನೆಲಿರ್ದು

ಹೊತ್ತ್iಗೆ ಹೊತ್ತು ನೆತ್ತಿಗೆ ಬಾತ್i
ಗಂಟೆನು ಕೂಡ ಹನ್ನೆರಡಾತ್i
ದಾರಿಲಿ ಹೋಂವ ಮಂಜಂವ ಬಾತ್i
ಮನೆಲೇ ಉಟ್ಟುಂತ ಕೇಳ್ಕನ ಹೇಳ್ತ್i
ಮಣೆನೂ ದಳೆನು ಕೊಕ್ಕೆಲಿ ಉಟ್ಟು
ತ ಟ್ಟಿನಱಬಾಗ್ಲ್ ಹಾಕಱಂಡುಟ್ಟು

ಊರುಲೇ ಇದ್ದರು ನೀರ್iಗೆ ಹೋಗ್iಟು
ನೂರರ ನೋಟು ನಿನ್ನೆನೆ ಮುಗ್ಸಿಟು
ನಿನ್ನೆನ ಅಮಱಲು ಇನ್ನೂ ಬಿರ್ತ್ಲೆ
ಚೆರಿಂಟೆಂದ್ ಬಿದ್ದುಟು ಒಲ್ಯೊಳೆಗೆ.

# ಪೋನು

ಪೋನು ಪೋನಣ್ಣ ಪೋನು ಪೋನೆ                ॥ ಪ ॥
ಪೋನು ಪೋನಣ್ಣ ಪೋನು ಪೋನೆ
ಅಂದೊಂದು ಕಾಲ ಇತ್ತ್‌ಂ ದೊಡ್ಡವರ ಮನೆಲಿತ್ತ್‌ಂ
ಇಂದೆಲ್ಲ ಮನೆ ಮನೆಲ್ಯುಟ್ಟು           ॥ ಪ ॥

ಗ್ರಾಚಾರ ಗೊತ್ತಿಲೆ ಗ್ರಾಂಬೆಲ್ಲ್ ತೇಳಂವ
ಕಂಡಿಡ್ದ ಮಿಸನಿದ್‌ಗಡ
ದೇಸ ದೇಸಲಿರುವ ಜನಂಗಳ ಒಟ್ಟಿಗೆ
ಕುದ್ದು ಮಾತಾಡಿಕೆನು ಆದೆ
ಸಂತೋಷದಾಗೂಲಿ ಬೇಜಾರದಾಗೂಲಿ
ಸುದ್ದಿ ಮುಟ್ಟಿಸಿಕ್ಕೂ ಆದೆ

ನಿಮ್ಮಲ್ಲಿ ತಿಂಡಿ ಎಂತ ಮಧ್ಯಾಹ್ನ ಗೈಪೆಂತ
ಗಂಟೇ ಗಟ್ಲೆ ಮಾತಾಡಿರೆ
ತಿಂಗಳ ಅಕೇರಿಗೆ ಬಿಲ್ಲೊಂದು ಬಾಕನ
ಮಂಡೆ ಬೆಚ್ಚನು ಆಗಿ ಹೋದೆ
ಬೇಡಾಗಿತಣ್ಣ ಪೋನು ಪೋನಣ್ಣಂ ತೇಳಿ ಆದೆ

ಮನೆಲ್ಯಾರು ಇಲ್ಲದಾಕನ ಹೈದಂಗು
ಗೂಡೆಗು ಕಊದ್ದು ಮಾತಾಡಿಕ್ಕೂ ಆದೆ
ವಿಸಯೆಲ್ಲ ಗೊತ್ತಾಗಿ ಬೊಯ್ದಾರೆ ಅಯ್ಯೆಪ್ಪ
ಎಸ್.ಟಿ.ಡಿ. ಬೂತುಲಿನು ಆದೆ

ಜಾಪಾನುಗೂ ಆದೆ ದ್ಯಾಪು ಮೋನುಗು ಆದೆ
ದುಡ್ಡಿದ್ದರೆಲ್ಲವ್ಕು ಆದೆ
ಅಜ್ಜಂದರಿರಿಗೂ ಆದೆ ಅಜ್ಜಿಕ್ಕಳಿಳಿಗೂ ಆದೆ
ಸ್ವರ ಮಾತ್ರ ಅದರ್ಲ್ಲಿ ಕೇಳ್ದೆ

ಕಾಲೇಜುಗೋವಂತ ಗೂಡೆ ಹೈದನ ಮನೆಲಿ
ಅದ್ಕೆಂತೂ ಪುರ್ಸೊತ್ತ್ ಇಲ್ಲೆ
ಜನಬೇರೆ ತೆಗ್ದರೆ ಸಬ್ದಲಿ ಟೂಂ ಟೂಂತ
ಮೆಲ್ಲಂಗೆ ಕಟ್ಟಾಗಿ ಹೋದೆ
ದಮ್ಮಯ್ಯಣ್ಣ ಪೋನು ಬೇಡಾಗಿತಣ್ಣಂತಾದೆ.



# ಬನ್ನೇಂತೇಳಿದ್ ನೀ

ಬನ್ನೇಂತೇಳಿದ್ ನೀ ಗೂಡೆ ಬರಾದೆ ಇರ್ಬಡಯಾ
ಬರಾದೆ ಇದ್ದರ್ರೂ ನಾ ಕರೀದು ಮರೆಕಿಲೆಯಾ
ರೋಡ್‌ಗೆ ರೋಡುಟ್ಟು ಗೂಡೆ ಸೂರಡಿವರೆಗುಟ್ಟು
ಬೈಲ್‌ನ ತಲೆಲ್ಲುಟ್ಟು ಈ ಹುಲ್ಲುನ ನನ್ನ ಮನೆ
ಮನೆಯದು ಲ್ಯಾಕಿಲ್ಲೆ ಸುತ್ತ ತಓಟ್ಟಿನ ನೆರ್ಕೆದುಯಾ
ಆನೆನು ಹುಕ್ಕುರುನೂ ಆಚೆಗೆ ಅರಾಮಲಿ ಹೊರ್ದುದುಯಾ
        ಉರ್ಗಿಲು ಬಾಗ್ಲಲೀ ಬೊಗುಳುವ ಬೊಗ್ಯೊಂದು ಮಲ್ಗಿರ್ದು
        ಗೊರಗೊರ ಸದ್ದ್‌ಗೆ ನೀ ಹದ್ಕಿ ಹೆದ್ರಿದ್ ಓಡ್ಬಡಯಾ
        ಅದು ನಾಯಿ ಬೊಗುಳ್ದಲ್ಲ ನಮ್ಮಪ್ಪನೆ ಕೆಮ್ಮುದುಯಾ
ಬಾಗ್‌ಲು ಸಣ್ಣಓದುಯಾ ನೀ ಬೊಗ್ಯಓಂಡ್ ಬರೊಂಕಾದ್ಯಾ
ನಾವ್ಗೆದು ಗೊತ್ತುಟುಯಾ ನಾವೆಲ್ಲಾ ಒಗ್ಯಓಳಯಾ
        ಒಳಗೆನ ಕೋಣೆಂದ ಬಾರಿ ಹೊಗೆ ಬಾದ್ಯಾ
        ಅದು ಬೀಜದ ಪ್ಯಾಕ್ಟ್ರಿ ಅಲ್ಲ ನಮ್ಮಮ್ಮನ ನಳಪಾಕಲ್ಯಾದೆ
ಬೈಲುಲೆ ಬಂದರೆ ನೀ ಕಾಗಡೆ ಪಾಲನ ದಾಟೊಕುಯಾ
ಒತ್ತೊಂದು ಪಾಲೊಳದು ಜಾಗ್ರತೆ, ಬಿದ್ದರೆ ಚೋಡಿಗೆಯಾ
        ಎಂಬತ್ತು ವರ್ಸಾಗುಟು ಅಜ್ಜೊಬ್ಬ ಟೈಟಾಕಓಂಡೆ ಇವ್ರೊರ್
        ಏನಾರ್ ಮಾತಾಡ್ರೆ, ಅವು ಕಂಡಪಟ್ಟೆ ಮಾತಾಡ್ವೊಂ
ನೀರಡಿ ಕೊಟೆಗೆಲಿಯಾ ನೀರದು ಕಾಯ್ತಿರ್ದು
ಅದು ಮೀಯಕೆ ನೀರಲ್ಲ ನಮ್ಮಪ್ಪ ಸರಾಯ ಕಾಸ್ತಿವ್ರೊರ್
        ಬನ್ನೇ ತೇಳಿದ್ ಗೂಡೆ ಬರಾದೆ ಇರ್ಬಡಯಾ
        ಬರಾದೆ ಇದ್ದರ್ರೂ ನಾ ಕರೀದು ಮರೆಕಿಲೆಯಾ.

# ಪೆರ್ಚಿನ ಗೂಡೆ

ಒಡ್ಬಡನೆ ಒಡ್ಬನೆ ಪೆರ್ಚಿನ ಗೂಡೆ
ಗದ್ದೆ ಪುಣೆಲಿ ಬೀಳ್ಬಡನೆ ಚೋಳಾದುನೆ ಗೂಡೆ
ಕಅಲ್ಲ್ ಬೇರುi ಎಡ್ಗಿರೆ ಉಗುರಿಲ್ಲೆನೆ ಗೂಡೆ
ಕತ್ತಲಾಕೆ ಹೊತ್ತು ಉಟ್ಟು ಮೆಲ್ಲನೆ ಗೂಡೆ
    ಹೇಳ್ಬಡನೆ ಹೇಳ್ಬಡನೆ ನಿನ್ನ ಅಪ್ಪಂಗೆ
    ಅಂವ ಬಾದು ಕಅತ್ತಿ ತಕಅಂಡು ಮತ್ತೆ ಪೆಟ್ಟಿಗೆ
ಬುಡ್ಬಡನೆ ಬುಡ್ಬಡನೆ ದಾಸು ಬೊಳ್ಳುನ
ಅವು ಭಾವಂ ರಣನಾಂಗೆ ಬೆರ್ಸಿ ಕಅಚ್ಚೆಕೆ
    ಓಡಿ ಓಡಿ ಬೆಗಅರಿ ಕಂಡ್ ಬೊಚ್ಚೆ ಕಂಬಡನೆ
    ಬಾಡಿಹೋದ ನಿನ್ನ ಮೋರೆ ಹೆಂಗೆ ನೋಡ್ದುನೆ
ನಿಲ್ಲ್‌ನೆ ನೀ ನಿಲ್ಲ್‌ನೆ ಇಂದು ನಮ್ಮ ಮನೆಲಿನೆ
ಅಂಗ್‌ಡೆಕ್ಕಿ ಬೊಂಗುಡೆ ಮೀನು ಗೈಪು ಉಟ್ಟುನೆ
ನೆಂಟ್ರ ಮನೆಂದ ನಮ್ಮ ಅಪ್ಪ ನಾಳ್ದು ಬಾವೊನೆ
    ಒರ್‌ಂಗಿಸುಬಡ ಸಿಟ್ಟ್‌ಲಿ ನೀ ನಿನ್ನ ಮುಸುಂಡುನ
    ಕಂಡದೆ ಅದು ಉಳ್ಳಿನಾಂಗೆ ನಮ್ಮ ಎಮ್ಮೆನ
    ಅಯ್ಯೋ ಮಾರಾಯ್ತಿ ದಮ್ಮಯ್ಯ ತಲೆಗೆ ಕ್ಅಲ್ಲ್i ಹೊಡಿಬಡನೆ
    ಒಂದು ಮುತ್ತು ಕೊಡುತ ಕೇಳ್ದರ್ಲಿತೊಪ್ಪು ಏನ್‌ನೆ
ಹೆದ್ರ್ಬಡ ನೀ ಚಾಣೆ ತಲೆನ ನಿನ್ನ ಅಪ್ಪಂಗೆ
ಹೇಂಗು ನಾಳೆ ನಾನು ನೀನು ಗಂಡ ಹೆಣ್ಣುiನೆ
ಕಾಣೆ ಆಮನ ನಾವು ಯಾರಿಗೂ ಗೊತ್ತಾಗದಾಂಗೆನೆ.

# ಬೆಂಗ್ಳೂರವ್ವ

ಉಂಗಿಲ ಮೊದುವೆಗೆ ಬೆಂಗ್ಳೂರವ್ವ
ರಂಗ್‌ನ ಸೀರೆಲಿ ಬಂದೊ
ಯಾಗೋ ಬಂದೊವು ಯಾಕೋ ಬಾತ್ಲೆ
ಇಂದವು ಎಲ್ಲೊವು ಬಂದೊ
ಹಂಗ್‌ನ ಬೊದ್ಕ್ ಮನೆದದ್ ತೇಳಿ
ದೂರದ ಪೇಟೆಲಿ ಅವು ಇದ್ದೊ
ಕಮ್ಮೇನಿತ್ಲೆ ಗಂಡಂಗು ಹೆಣ್ಣಗು
ದೊಡ್ಡ ಚಾಕ್‌ರಿಲ್ಯವು ಇದ್ದೊಂ

ಪೊಂಗರೆ ಮುಳ್ಳುನಾಂಗೆ ಎತ್ತರ ಮುಡುನ
ಜೋಡವು ಕೂಡ ಹಾಕ್ಯಂಡಿದ್ದೊ
ಅರೆ ನರೆ ಬಂದ ಕೂದಲುಗೆಲ್ಲ
ಕಱಪ್ಪುನ ಬಣ್ಣ ಉದ್ದಿದ್ದೊ

ಬಣ್ಣದ ಬೊಳ್ಪುಗೆ ಪಳಪಳ ಹೊಳಿವ
ಬೆಳ್ಳಿನ ಗೆಜ್ಜೆ ಕಾಲ್ಗಿತ್ತ್
ಸಾವಿರ ಬೆಲೆನ ಚೈನಾ ಸಿಲ್ಕ್
ಕಱಣ್ಣುಗೆ ಬೈಂಕಾಕುತ್ತ್ ತಿತ್ತ್

ಕಣ್ಣಿಗೆ ತುಂಬಾ ಕಾಡಿಗೆ ಉದ್ದಿ
ಒಂದ್ವರೆ ಇಂಚು ಪೌಡರ್ ಮೆತ್ತಿ
ಐವತ್ತಾದರು ಇಪ್ಪತ್ತಾದ ಗೂಡೆನ ಹಾಂಗೆ ಬಾತಿತ್ತ್
ಕುಂಡೆನ ಅಳ್ಗಿಸಿ ಸೊಂಟನ ಪೊಳ್ಕಿಸಿ
ಕೊಡೆನದ್ ಸೂಂಡಿ ಬಾತಿತ್ತ್
ಕಱಣ್ಣಿಗೆ ಹಾಕಿದ ಕೂಲಿಂಗ್ಲಾಸ್‌ಲಿ
ಎಲ್ಲಾ ಮುಗಾಱಲ್ ಕಾಣುತ್ತ್

ಎಂತಪ್ಪ ಸೆಖೆ ಈ ಹಳ್ಳೀಂತೇಳಿ
ಬೆಂಗ್ಳೂರು ತೊಂಪುನ ಹೊರುತಿತ್ತ್
ಬಲಕ್ಕೈಲಿರುವ ಚೌಕದ ಅರುವೆಲಿ
ಬೆಗ್ರಿದ್ ಗಾಳಿ ಹಾಕ್ತಿತ್ತ್

ಜಾಲ್iನ ದಾಟಿ ಸೂರಡಿ ಮೆಟ್ಟ್ ಹತ್ತಿದ್
ಒಳಗೆ ಬಾಕಿತ್ತ್i
ಹೆಡೆಗೆಲಿ ಮಲ್ಗಿದ ಬೊಗ್ಯದ್ ಬೊಗ್ಗಿ
ಎಗ್ಗಪ್ಪ ಹಕ್ಕಲೆ ಹಾರಿತ್ತ್

ಹದ್ಕಿದ ಅಜ್ಜಿ ಕಾಲಡಿ ಮೊಗ್ದ್
ಹಲ್ಸನಣ್ಣುನಾಂಗೆ ಬಿದ್ದಾತ್i
ರಾಮ ರಾಮ ತೇಳಿ ಅಲ್ಲೇ ಇದ್ದಅವು ರಟ್ಟೆಲಿ ಹಿಡ್ದ್ ಎದ್ರಿಸಿದೊಂ

ರೆಟ್ಟಿದ್ ಹೋದ ಹಲ್ಲ್‌ನ ಸೆಟ್ಟ್ ಜಾಲ್ಲ್‌ನ ನೆಡುಗೆ ಎತ್ಯಾತ್
ಬೊಗ್ಯದ್ ಹಾರಿ ಅದರ ಕಅಚ್ಚೆಕ್ಅಂಡು
ತೋಟದ ದಾರಿ ಹಿಡ್ದಿತ್ತ್
ನಾಯಿನ ಹಿಂದೆಕಅಂಡ್ ಮನೆಯಂವಒಬ್ಬ
ಕೂರ ದುವೋಂತ ಒಡ್ತಿತ್ತ್
ಏಮೆನ ಬಾಯ್ನಾಂಗೆ ಬೆಂಗ್ಳೂರವ್ವ
ಅಜ್ಜಿ ಆಗೊಳಂತ ಗೊತ್ತಾತ್

ಸೇರ್ದವು ಜೆನಂಗ ಅಜ್ಜಿಕ್ಕ ಎಲ್ಲ
ಗೊಳ್ಳೋ ಅಂತ ನೆಗೆ ಆಡ್ದೊ
ಸಿಟ್ಟುನು ಬಾತ್ ಅವಮಾನಾತ್
ಬೊಯ್ಕಂಡ್ ಬೆಂಗ್ಳೂರ್ ಗೊರ್ಬ್ಯೋತ್i
ಆಗಳೆ ಗೊತ್ತಾದ್ ಅಜ್ಜಿಕ್ಕ ಕೂಡ
ಪೇಟೆಲಿ ಇಷ್ಟೊಂದ್ ಪೊಲ್ರೋಳದ್i

ಅಲ್ಯವ್ಯಕಟ್ಟು ಹಲ್ಲುನ ಸೆಟ್ಟ್
ಇಲ್ಯೊಳಾ ಅಜ್ಜಿಕ್ಕ ಬೊಕ್ ಬಾಯ್ಬುಟು
ಕೋೕಲನ ಮಾಡುವ ಮನ್ಸೆಲುಟ್ಟು
ಮಾಡಿರು ಅದರ್ಲಿ ಸುಕ ಏನುಟ್ಟು
ಪ್ರಾಯನು ಆಗಿ ವೈಸದ್ ಮಾಗಿರು
ಮನ್ಸದ್ ಕೇೕಳಿದೆನಾ
ಮೆತ್ತಿಕೆ ಮೋೕರೆಗೆ ಪೌಡರ್ ಇರ್ದು
ಚಾಣೆ ಆದ ತಲೆಗೆ ಟೋೕಪನು ಇರ್ದು
ಬಟ್ಟೆನ ಸುತ್ತಿರು ಬಣ್ಣನ ಮೆತ್ತಿರು ಹದ್ನಾರರ ಹೈದಾದೋ
ಪ್ರಾಯಕೆ ಕೋೕಲನು ಸಮಹೋೕದಾ

ಪ್ರಾಯಕ್ಕೆ ತಕ್ಕ ಕೋೕಲನೆ ಲ್ಯಾಕ್
ಮುಪ್ಪುಲಿ ನರೆಗಡ್ಡನೆ ಆಕು
ಪೇೕಟೆ ಮೋೕಡಿಗೆ ಮಾರ್ಯೋೕಗಿ ಇಂದ್!
ಅಜ್ಜಿಗು ಜೇೕನ್ಸ್ ಪೇೕಂಟೇೕ ಆಕು

ಬೆಳ್ಳಂಗೆ ಗಡ್ಡ ಅಜ್ಜಂಗೆ ಲ್ಯಾಕ್!
ಬೊಕ್ಕು ಬಾಯಿ ಅಜ್ಜಿಗೂ ಲ್ಯಾಕ್!
ಅಲ್ಲೇೕ ನೋೕಡಿಕೆ ಪೊಲ್ಲೊಳದ್
ಅಡಿಂಗಿಸಿಕೆಂತದು ಅಲ್ಯೊಳದ್
ಅಲ್ಲೇೕ ಪಾತ್ರಕೆ ಜೇೕವೊಳದ್ ಅಲ್ಲೇೕ ಬೊದ್ಕುನ ತಿಳ್ಳೊಳದ್!

# ಮುದಿಮೋಲು

ಒಲೆಗೊಂದು ಚಿರುವೆ ಕೊಳ್ಳಿನಾಂಗೆ ಇತ್ತ್
ಮನೆಲ್ಯೊಂದು ಅಜ್ಜಿ
ಕಿರಿಕಿರಿ ಹುಚ್ಚುನ ಬುಟ್ಟರೆ ಅಜ್ಜಿದೇ ಪಿರಿಪಿರಿ
ಅದ ಓ ಅಲ್ಲಿ ಕಂಡದೆಲೆ ಕೋಳಿ ಪಾರಕುದ್ದುಟು
ಕೆಬಿಲಿ ಚಿನ್ನದ ಓಲೆ
ನೇಲ್ದ್ ಜಬ್ಬಲು ಮೊಲೆ ರೌಕೆ ಹಬ್ಬಲೂ ಇಲ್ಲೆ
ಕೈಲಿ ದೊಣ್ಣೆ ಬೆತ್ತದ್ ಜಾಲುಲ್ಯುಟ್ಟ್ ಬತ್ತದ್
ಪಾರ ಕುದ್ದುಟು ಸುತ್ತದ್ ಉಟ್ಟನ ಉರಿ ಬಿಸ್ಲ್‌ಲಿ
ಸೀರೆ ಅರ್‍ವೆ ಗುಡ್ಗ್ ಹಾಕಿ ಬೆಳ್ಳಿ ಸೆರ್‍ಗ್ಗನಾಂಗಿದ್ದ ತಲೆಕುದೊಲುನ ಮೇಲೆ
ಏನೂ ಕಾಂಬೊದುಲೆ ಗಡ, ಕಣ್ಣು ಎಲ್ಲ ಮಯಮಯಗಡ
ಕಾಗಡೆ ಪುಣೆಲಿ ಹೋವ ದ್ಯಾಪುನ ಗುರ್ತ ಸಿಕ್ಕಿದೆ
ಅಡ್ಡಗದ್ದೆಲಿ ದನ ಮೇಯ್ದು ಕಂಡದೆ
ಏನೂ ಕೇಳ್ದುಲೆಗಡ ಸೌಕೇಂತ ಕೇಳಿರೆ ರೌಕೆನಾಂತೇಳ್ದೆ

ಸೊಸೆ ಎಲ್ಯಾರು ಒಳಗೆ ಪಾತ್ರ ಬೀಳ್ಸಿರೆ
ಹೋತು ಲಗಾಡಿಹೋತು ಕೈಗೆ ಕೊಟ್ಟ ಹಿಡೆಕೆ,
ಇನ್ನೂ ದೂರ ಇಡ್ ತೇಳ್ದು
ನಿನ್ನ ಕಾಡ್ಕ್ಯೊತ್ತಿ ಹೊರ ಸಿಯೋ ತೇಳಿ ಕೋಳಿ ಬೆರ್‍ಸುದು
ಕುದೆಂಟಿ ಎಳ್ದ್ ಹೊಡೀದು
ಹಿಡ್ದದ್ ಆತ್ಲೆ ಮುಟ್ಟಿದ್ ಆತ್ಲೆ, ಬೊಯ್ಗಳು, ಪರ್‍ಂಚೆಲ್
ಹೊರು ಮಂಜ ಹೊರು ಹೆಣ್ಣುನ ತಲೆಲಿ ಹೊರುತೇಳಿ
ಮಂಜಂಗೆ ಬ್ಯೊದು
ಏನು ತಂದರೂ ಅಜ್ಜಿಗೆ ತೋರ್‍ಸ್ಬೋಕು
ಎಲ್ಲಿ ಹೋದರೂ ಅಜ್ಜಿಗೆ ಹೇಳೊಕು
ದಾರಿಲಿ ಹೊದ ಸಾಲೆಮಕ್ಕ ಬೀಜಮರಕೆ ಕಲ್ಲು ಹೊಡ್ದರೆ
ಕಂಡ್ರ, ಕುಟ್ಟಿಗ ನಿಮ್ಮ ಎರ್‍ಪೆ ಬೆಳೆವು ಗುಂಡಿ ಕಡ್ಯೆವು ತೇಳಿ ಬೆರ್‍ಸುದು

ದಾರಿಹೋಕರ ಗೆಬ್ಬಳ್ಸಿ ನೋಡಿ ಕರ್ರೈಕು
ಮಾತಾಡಿ ಒಂದು ಚಕ್ಕಳ ಕುಡೆಕೆ ಕೊಡೊಕು
ಎರ್ಡ್ ಹಾಳೆ ಒಲೆಗೆ ಹಾಕಿ ಬೆಚ್ಚಂಗೆ ಎರ್ಡೊಣ್ಕ್ ಮೀಕಣಕು
ಮೀಯಕೆ ಮುಂದೆ ಕೈಕಾಲ್‌ಗೆ ಎಂತೋ ಎಣ್ಣೆ ಹಾಕೊಣಕು
ಮಯ ಮಯ ಕತ್ತಲಾಕನ ಪುಲ್ಲಿಂಗೆತ್ತಿ ಹೇಂಟೆನ ಮುಚ್ಚಾಕಕು

ಎದ್ದಾಂಗೆ ಬೊಳ್ಪುಗೆ ಕಣ್ಣ ಚಾಯಾಕು ಒರ್ಲ್ಲಿ ಗುದ್ದಿ
ಎಲಾಡ್ಕೆ ಬಾಯ್ಗಾಕಣಕು
ಕೊಟೆಗೆ ನೆರ್ಕೆ ಹತ್ತಿ ಕೋಳಿ ಕಾಪುನೊಮ್ಮೆ ನೋಡೊಕು

ಕೆಂಪಿ ಕೂಡಿಕೆ ಬಾತ್ಲರೆ ಎಮ್ಮೆದಿಕ್ಕ್ ತೊಪ್ಪಿರೆ
ಕರಿಭೂತ ಬಿಳಿ ಭೂತಂಗೆಲ್ಲ ಹರ್ಕೆನೆ
ಸುಂಪೆ ಮಾಡ್ದು ಮಾಯ್ಪು ಮಾಡ್ದ್
ಕಅರಿ ಉಂಡೆ ಮಾಮೂಲು ಅದರ ಪಣೆ
ಅಲ್ಲಿ ಕುಮೆರಿ ಕಅಡ್ದೆ ಇಲ್ಲಿ ಬಿತ್ತಿದೇಂತ ಹೇಳ್ದು
ಕಅಲಿ ಕಾಲಣ್ಣ ಈಗನವು ಸೊಕ್ಕತ್ತ್ಯೋದಂತ ಬ್ಯೊದು
ಪಿರಿ ಪಿರಿ ಬುಟ್ಟರೆ ಅಜ್ಜಿ ಹಞ ಸೀದನೆ.

# ಕೊಣೆಯಮನೆ

ಕೊಣೆಯಮನೇ ನಾವ್ ಕೊಣೆಯಮನೇ
ಸೀರ್ಯುಟ್ಟು ಬಳೆ ತೊಟ್ಟ್ ಬೇಗ ಬಾನೆ
ಕಱತ್ತಿ ಮೊಡ್ಪಾಳೆಲ್ಲ ಕರೆಗಿಸಿದ್!
ಮಾಮೂಲು ಕೆಲ್ಸಕ್ಕೆ ರಜೆ ಮಾಡಿದ್
ಗೊತ್ಲೆನ ಊರಿಗೆ ಹಬ್ಬಲ್ಲನೆ
ಮಲ್ಕೆಂಡ್ ಮಟ ಮಟ ನೋಡ್ಯಾಕೆನೆ ॥ ಕೊಣ್ಯಮನೆ ॥

ನಾವ್‌ಗಿರ್ದು ಬಡ್ತನ ಬೊಡ್ಕಲಿನೆ
ನಾವ್ಗಿಲ್ಲೆ ಉದಾಸೀನ ಮನ್ಸ್‌ಲಿನೆ
ಕೊಡ್ಕಿದ್ ಎದ್ದ್ ಬಾ ಒಲ್ಲಿನನೇ
ಕೊಣೆಯಮನೇ ನಾವ್ ಕೊಣೆಯಮನೇ

ಮೂಡಱಲಿ ಬಾಣಱಲಿ ಹೊತ್ತ್‌ನು ಬಾಕ್ಯಾತ್
ಬೆಳ್ಳೇರಿ ಮಾಣಿಕ ಮರ್ಪದೆನೆ
ಹನಿನೀರ್ ಅರ್ದದೆ ಬೊಳ್ಪುನಚೆಳಿಗೆ
ಕೂಂಗ್ಯಾವ್ಪು ಹುಂಜಗೆ ಆಗಳೆನೆ ॥ ಪ ॥

ತೀರವ್ಕಿರ್ದೇನೆಲ್ಲ ಸೌಕರ್ಯನೇ
ಅವು ತಾವ ಕೊಂಬು ಓಲಗನೇ
ತಿಂಗೊಳು ಬೊಳ್ಪುಟ್ಟು ಸೂರಡಿ ಜಾಲುಟ್ಟು
ಕೊಣೆಯಮನೇ ನಾವ್ ಕೊಣೆಯಮನೇ

ದ್ಯಾಪುನ ಮನೆಂದದ್ ದೆನಿ ಕೇಳ್ದೆನೆ
ಕೆಬಿಕೊಡು ಸೋಬಾನೆ ಪೊದ್ಯಲ್ಲನೆ
ಅದಕೇಳ್ ಚೋಮನ ದುಡಿ ಕೇಳ್ದೆನೆ
ಬೊಟ್ಟಂಲಿ ಕೂಡ ಗಮ್ಮತ್ತ್‌ನೇ
ದುಕ್ಕೆಲ್ಲ ಮರ್ತ್‌ದ್ ಕುದ್ಕಂಗ ಕಳ್ಕ್‌ವೆ
ಊರಾಚೆ ಕರೆನ ಗುಡ್ಡೆಂದನೇ

ಒದ್ಕ್‌ವ ಬೊದ್ಕ್‌ಲಿ ಹಞೀರು ನೆಗೆ ಇರೋಕು
ಅದ್ಕೆಲ್ಲ ತೇಳ್ಯೊಳದು ಹಬ್ಬಲ್ಲನೆ.
ಮರಿಯೊಕು ನಾವಿಂದ್ ಚಿಂತೆನನೆ
ಮೊದೊಳೀಗೆ ನಾಂಗೆ ನೀ ಹೊರ್ಟ್‌ಬಾನೆ
ಕೈತುಂಬ ಬಳೆನೆಲ್ಲ ಹಾಕಿ ಬಾನೆ
ಮೈ ಮರ್ತ್ ನಾವಿಂದ್ ಕೊಣೆಯಮನೆ.

# ಎರ್ಪ ಅಪ್ಪನ ಕುದ್ಕ ಮಂಜಿನೂ

ಬಾರಿ ಎರ್ಪ ಅಪ್ಪಂಗೊಬ್ಬ ಕುದ್ಕನಾಂಗಿದ್ದ ಮಂಜ ಇತ್ತ್
ಎರ್ಪ ತೇಳ್ರೆ ಬೈಂಕರಯ ಮಾತು ಕಡಿಮೆ ಗುಣ್ಕಯಾ
ಎಷ್ಟೇ ಬೇಕು ಅಷ್ಟೆಯಂವ ಕಾರ್ಯ ಜಾಣ ಕಿಣೆಯಯಾ
ಸೀರೆನೋಳಗೆ ಜೋಂಗುಲಿ ಚೆಡ್ಡಿ ಬೀಗದಕ್ಕೆ ಜೋಬುಲಿಯಾ

ದಮ್ಮಯ್ಯನಾ ಸೋತೆಂತೇಳ್ರು ಐದುಪೈಸೆ ಬಿಚ್ಚಿಕಿಲೆ
ಗುಟ್ಟು ತೇಳ್ರೆ ಅವನ ಸುದ್ದಿ ಯಾರಿಗು ಗೊತ್ತಾಕಿಲೆ
ಮಾಸತರೆಕನ ಸಬ್ದ ಕೇಳ್ದುಂತ ಒಟ್ಟಿಗೆ ಕೆಮ್ಮ ದಿರಿಕಿಲೆ
ಯಾರೇ ಬಂದರೂ ಎರ್ಡೇ ಮಾತ್ i ಚಕ್ಕಳ ಕುಡೆಕೆ ಕೊಡಿಕಿಲೆ

ದುಡ್ಡು ಮಾಡ್ವ ಸಂಗತಿ ಬುಟ್ರೆ ಅವಂಗೆ ಎಂತ ಗೊತ್ತ್ಲೆ
ಹಕ್ಕಲೆ ಮನೆಗೆ ಕಿಚ್ಚಿಬಿದ್ದರೂ ಬೀಡಿ ಹೊಸುದಂವ ಆದರ್ಲೆ
ಯಾರು ಏನೇ ಇದ್ದರೆಷ್ಟ i ಸತ್ತರು ಅಂವ ಹೋಕಿಲೆ
ಊರು ಮೇಲೆ ಊರು ಬಿದ್ದರು ಅಂವನ ಸೇಟ ಹೋಕಿಲೆ

ಹೆಂಗೋ ಹುಟ್ಟಿತೋ ಅವಂಗೆ ಒಮ್ಮೆ ಕುದ್ಕನಾಂಗಿದ್ದ ಮಂಜಯಾ
ಅಪ್ಪ ಮಾಡ್ದ ಕಡ್ಕೆನೆಲ್ಲ ಹೆಗ್ಗಣನಾಂಗೆ ಕೊರಿದುಯಾ
ಎಷ್ಟೇ ಆದರು ಅಪ್ಪ ಕೊಡ್ದು ಲೆಕ್ಕದೆ ಅವಂಗೆ ದುಡ್ಡುಯಾ
ಎಲ್ಲಿಗೆತ್ತಿದೆ ಬರೀ ಗೂಡೆಗೆ ಕಳ್ಸುವ ಗ್ರೀಟಿಂಗ್ ಕಾರ್ಡಿಗೆಯಾ
ಮತ್ತೆ ಅವಂಗೆ ಕಮ್ಮಿ ಇಲ್ಲೆ ಊರು ತುಂಬ ದೋಸ್ತಿಗ
ಇಸ್ತ್ರಿ ಹಾಕಿ ಬೊಳ್ಳುಗೋದರೆ ಹಾಜಿರ್ಮಾತ್ರ ಸಾಲೆಲಿ

ಬೈಕ್ ಹತ್ತಿ ಮನೆಗೆ ಬಾದು ಹೋದ ಮೇಲೆ ಬಸ್ಸ್‌ಗ
ಅಯ್ಯೆ ಕೊಟ್ಟ ಚೈನ್‌ನಿಸಿಟ್ಟು ದುಡ್ಡುಗೆ ಎಲ್ಲೋ ಅಡುವುಲಿ
ದುಡ್ಡು ಕೇಳ್ರೆ ಅಪ್ಪ ಕೊಡ್ದು ಅವಂಗೆ ಬೈಂಕರ ಚೊದಿರೇಲಿ
ಅದರು ದುಡ್ಡು ಮಾಡ್ದೆ ಅಂವ ಬಾರಿ ಕಳ್ಳಕಿಣೇಲಿ

ಅಟ್ಟಲಿದ್ದ ಮೆಣ್ಸ್ ಗೋಣಿಗೆ ಚುರಿದು ಓಟೆಬಾಸ್‌ನಯು
ಬರೋಂ ತೇಳಿ ಬೀಳ್ದರೆಲ್ಲ ಕಟ್ಟಿಕಂಡೆಲ್ಲ ನಡಿದುಯಾ
ಬೀಜ ಮಾರಿಕೆ ಅಯ್ಯೆ ಇವನ ಕೈಲಿ ಹೊರ್ಸಿ ಕಳ್ತ್ಸರೆ
ಕೆ.ಜಿ. ಹಂಞಾ ಕಊಮ್ಮಿ ಬರ್ಸಿ ಇವನೆ ಚೀಟುತಾದುಯಾ
ಬೆಂಡನೆಲ್ಲ ಕೆತ್ತಿ ಕುಡ್ದ್i ಕುಬೆಲೆ ಎಲ್ಲ ಸೆಕ್iಸುದು
ಅಡ್ಕೆ ಕಾಯಿನೆಲ್ಲ ಕಊದ್ದ್i ಆಳ್‌ನೊಟ್ಟಿಗೆ ಸಾಗ್ಸ್‌ದು
ಅಪ್ಪ ನೋಡ್ಕನ ಮೇಲೆ ಮೇಲೆ ಇದ್ದ ಹಾಂಗೆ ಇದ್ದದೆ
ಕೊಟ್ಟತ್ಲರೂ ಮಂಜ ಕದ್ದು ದುಡ್ಡು ಬೇಕಷ್ಟು ಮಾಡಿದೆ
ಮೂಕೊಳ್ಮೇಲಿ ಅಪ್ಪ ಬೈಂಕರ ಮುಂಗುಲಿ ನಾಂಗೆ ಇದ್ದರೆ
ಎಂದೂ ಸಿಕ್ಕದ ಪೊಳ್ಳುಕುದ್ಕ ನಾಂಗೆ ಇರುವ ಮಜಯಾ
ಅಪ್ಪಂಗೆ ಮಾತ್ರ ದುಡ್ಡೆ ಆಕು ಮಂಜಗ್ಗೆ ಊರು ಜೆನಂಗಬೇಕು
ಕುದ್ಕ ಮಂಜ ಅಪ್ಪಂಗೆನೇ ಮಾಮೂಲು ಬೊತ್ತಿ ಇಸುದುಯಾ.

# ಪೋಯಿನೆ ಗೂಡೆ

ಪೋಯಿನೆ ಗೂಡೆ ಪೋಯಿನೆ ಗೂಡೆ
ಯಾಕೆನೆ ಮೋಡೆ ಹತ್ತ್ನೆ ಗೋಡೆ
ಮಳೆಯದ್ ಬಂದರೆ ಉಟ್ಟುನೆಕೊಡೆ
ಸಿಂಗಾರ ಮಾಡಿದ್ ಹಾಕ್ನೆ ಜೆಡೆ

ಯಾರಿಗು ಕಾಣದೆ, ಹೋಕಾ ಪುಡೆ
ಎಚ್ಚರಿಕಾದರೆ ಮನೆಯವ್ಕೆಲ್ಲ
ಮತ್ತೆವು ಆವಯ ಬೈಂಕರಪೀಡೆ

ಅಪ್ಪನು ಇಂದು ಮನೆಲ್ಯದ್ ಇಲ್ಲೆ
ಹಕ್ಕಲೇ ಮನೆನ ನಾಯಿನು ಇಲ್ಲೆ
ಅಮ್ಮದ್ ಹೇಂಗಾರ್ ಒಪ್ಯಾವ್ಟಲೆ
ಇನ್ನೇನ್ ನಿಂಗೆ ಹೊರ್ಟಾಕಲೆ

ಗಂಟೆನು ಕೂಡ ಹನ್ನೆರಡಾತ್
ಹೊರ್ಡ್ನೀ ಬೇಗ ಬೈಕ್ನು ತಂದೊಳೆ
ಇಷ್ಟೊತ್ತಾಕನ ಎತ್ತಕಾಯ್ತು ನಾವು
ಯಾಗೋ ನಾವು ಪುತ್ತೂರುಂದಾಚೆಗೆ

ಸೌಂದ್ರದ ಕರೆಲಿ ಕೈಕೈ ಹಿಡ್ಕಂಡ್
ಪೊಯ್ಯೆಲಿ, ತೆರೆಲಿ ಎದ್ದ್ದ್i ಬಿದ್ದ್ದ್
ಐಸ್ಕ್ರೀಂ, ಚರ್ಮುರಿ ತಿಂದ್ದು ಹಿಂಬೊತ್ತು
ಮಿಲಿಕುಳಕೋಗಿ, ಜೋತಿಲಿ ಒಂದು ಪಿಚ್ಚರ್ ನೋಡಿ
ಮೊರ್ದಿನ ಬರನ.

॥ ಪೋಯಿನೆ ॥

# ಕಾದ್ ನಿತ್ತದೆ ಹೈದ

ಕಾದ್ ನಿತ್ತದೆ ಹೈದ ಮಾಮೂಲು ಜಾಗೆಲಿ
ಅದೇ ಗಲ್ಲಿ ಅದೇ ಜಾಗೆ ಅದೇ ಕಡಱವುಲಿ
ಡಕ್ಕ್ ಬಕ್ಕ್ ಬೂಡ್ಸ್‌ಲಿ ಪೊಲ್ರ್ಯನಂಗಿ ಪೇಂಟ್‌ಲಿ
ಸಿಗ್‌ರೇಟ್ ಹೊತ್ತಿಸಿ ಕುದ್ದುಟು ಬೈಕ್ ಸೀಟ್‌ಲಿ

ಕುಞ ಹೈದಂಗೆ ಅಂಗ್ಡಿಂದೆರ್‌ಡ್ ಮಿಠಾಯಿ ತೆಗ್ದ್‌ಕೊಟ್ಟ್
ಕಾಗದ ತಕಱಂಡ್ ಜಾಗ್ರ್ತೇಲಿ ಅಕ್ಕಂಗೆ ಕೊಡುತ ಕೊಟ್ಟುಟು
ಕಾದು ನಿತ್ತುಟು ಹೈದ ಮಾಮೂಲು ಜಾಗೆಲಿ

ಮನೆಲಿ ಏಳೆಂಟು ಸುಳ್ಳುಹೇಳಿ ಕೆಲ್ಸ ಕೆಲ್ಸ ಸೂನು ಹೇಳಿ
ಸೀತ ಜರಕೆ ಮೊದ್ದು ತಕಱಂಡು ಬನ್ನೆಂತೇಳಿಯಾ
ಕಾದು ನಿತ್ತತ್ ಹೈದ ಹಳ್ಳದಾಚೆ ಕರೆಲಿಯಾ

ದೊಡ್ಡ ನೀರ್‌ನ ಮೀಸಿ ದಾಟಿ ಅಡ್ಡದಾರಿಲಿ
ಅಪ್ಪನ ಜೋಬುಂದ ಕಱದ್ದ ದುಡ್ಡುಲಿ ಗುಲಾಬಿ ತೆಕಂಡ್‌ಯಾ
ಬೆನ್ನ್ ಬೆನ್ನ್‌ಗೋರ್ಗಿಕುದ್ದು ಗಂಟೆಗಟ್ಲೆ ಮಾತ್i ಆಡಿ
ಹಕ್ಕಲೆಕ್ಕಲೆ ಕದ್ದ್i ಕಱಡ್ ಮುದ್ದು ಮಾಡಿಕೆ
ಕಾದು ನಿತ್ತದೆ ಹೈದ ಮಾಮೂಲು ಜಾಗೆಲಿ

ಮುಗುಳು ನೆಗೆಲಿ ಬಾವ ಗೂಡೆನ ಪೊಲ್ರ್ಯ ನೋಡಿಕೆ
ಗಾಳಿ ಹಾಕಿ ಧೈರ್ಯ ಕೊಡುವ ದೋಸ್ತಿ ದೂರಲ್ಯಡ್‌ಂಗೆಡುಟ್ಟೊ
ಕನ್ನಡ ಮಾಸ್ಟ್ರ ಪಾಟನಂತು ಮಾಮೂಲಂವ ತಪ್ಪಿಸ್ಯುಟ್ಟು
ಕನ್ಸ್‌ಲೆಲ್ಲ ಹಂಸ ನಾಂಗೆ ನಡಿವ ಗೂಡೆಗೆ
ಮನ್ಸ್‌ಲೆಲ್ಲ ರಾಣಿ ನಾಂಗೆ ನೆಗಾಡ್ವ ಪೊಲ್ರ್ಯಗೆ
ಮಂದ ಗಮನೆ ನಾಂಗೆ ಬಾವ ಸುಂದರಾಂಗಿಗೆ.

# ಹೋಕುಂತಾದೆಯ

ಹೋನೆಯಾ ನಂಗೆ ಹೋಕುಂತಾದೆಯ
ಮತ್ತೆ ತಿರ್ಗಿದ್ ಹಳ್ಳಿಗೆ
ಪೇಟೆ ಬೊದ್ಕ್ ಬೇಜರಾಗುಟು
ಹಳ್ಳಿ ನೆಮ್ಮದಿಂತಾದೆಯ
ಮೇಲು ನೋಟಕೆ ಪೇಟೆಕಾಂಬಕೆ
ಬಾರಿ ಪೊಲ್ರ್ಲು ಮಾರಾಯಾ
ಸುಕನೇ ಇಲ್ಲೆ ನೋಡಿರು
ಹೊಗೆನ ಇಸದ ಗಾಳಿಯಾ

ಅಲ್ಲಿ ಇರ್ದುr ಕಾಡುಗುಡ್ಡೆ ಪಚ್ಚೆ ಪಚ್ಚೆನ ಮರಗಯಾ
ಹೊಟ್ಟಗುಳ್ಳುಗಮೆ ಕಾಡುಕೋಳಿ ಮತ್ತೆ ತೆಕ್ಕಟೆ ಸ್ವರಗಯಾ
ಚೊಳಚೊಳಂತ ಸಬ್ದಮಾಡಿ ಹರಿವ ಲ್ಯಾರ್‌ನ ಹಳ್ಳಂಗ
ಮೀಸಿ ಆಡ್ಕನ ಹಳ್ಳಂಗಲ್ಲಿ ಹಿಂಡ್ ಹಿಂಡ್‌ನ ಮೀನುಗ

ಬೀಸಿ ಬಂದದೆ ಸುಂಯೋ ತೇಳಿ ಬೊಳ್ಪುನ ಪಲಗಾಳಿಗೆ
ಪಲನು ಹೋಗುಟು ಮಿಡಿನು ಆಗುಟು ಬೀಜ, ಮಾಯ್ಣಣ್ಣು ಮರಅಲಿಯಾ,
ಬಿಸ್ಲ್ ಬೀಳದ ಕಾಡ್‌ನಾಚೆಲೆ ಇರ್ದುr ನನ್ನ ಆಮನೆ
ಇಂದ್‌ನೋ ಮಂಜ ನಾಳೆ ಬಾದ್‌ತ ಕಾಯ್ತ ಇರ್ದುr ನನ್ನಮ್ಮನೆ

ಚಿಗ್‌ರ್ ಹುಲ್ಲು ಮೇಂದುಕಂಡೊಳೊ ಎಮ್ಮೆ ದನಗಳ ಹಿಂಡ್‌ಗಾ
ಹೊಟ್ಟೆ ತುಂಬಿ ಕಅರುಗ ಚುಳ್ಳುವೆ ಅಡ್ಕದುದ್ದಕೆ ಕುಸಿಲಿಯಾ
ಬ್ಯೊಲು ತಲೆಂದ ದೆನಿನು ಕೇಳ್ದೆ ಹೂಡ್ವೆಕಂಡದೆ ಗದ್ದೆಲಿ
ಸಾಲು ಕುದ್ದಳ ಗೀಣ ಕೊರ್‌ಂಗ್‌ಗ
ಚಾಳೆ ಮಡ್ಲೆಲಿ ಸಾಲ್‌ಲಿ

ಹೊಗೆನು ಹೋದೆ ಬಾಣ ಮುಟ್ಟಿದೆ
ಚೂಟ್ ಮೊಣ್ಣ್‌ನ ರಾಸಿಂದ
ಒಂಟೆ ನಾಂಗೆ ಬೊಗ್ಗಿ ಎದ್ದದೆ ಚೊಂಟೆ ನಱಟ್ಟಿಗದ್ದೆಲಿ
ದೈಗ ಬೊಗ್ಯಳ ಬೆಂಡೆ ಎಲ್ಸಂಡೆ ಸೋಂತೆಕೆಂಬುಡೆ ಚಪ್ಪರಱಲಿ

ಪೇಟೆ ಬೊದ್ಕ್‌ನ ಸೋಕಿ ಸೋಗುನ ಗಾಳಿ ಇಲ್ಲಿ ಸೋಂಕದೆ
ದುಡ್ಡವೇ ಜನ ತಮ್ಮ ಪಾಡ್‌ಗೆ ಯಾರ ಹಂಗುನು ಇಲ್ಲದೆ
ಮೊದುವೆ ಬೊಜ್ಜ ಆಟ ಇರಣ ಕೆಡ್ಡಸ ಮತ್ತೆ ಹೊಸ್ತ್‌ಲಿ
ಎಲ್ಲ ಸೇರಿ ಬಿಟ್ಟು ಗೂಡಿ ದಿನನಕಳ್ಡವೆ ಪೊಲ್ರ್ಯಲಿ

ದೆವ್ವ ತಂಬಿಲ ಕೋಳಿ ಕಟ್ಟ
ಕೋಣ ಕಂಬಳ ಜಾತ್ರೆಗ
ಎಡೆಲಿ ನಡ್ಡದೆ ಬಾರಿ ಗೌಜಲಿ
ಅದೇನು ನೋಡಿಕೆ ಪೊಲ್ರ್ಯಯಾ ॥ ಪ ॥

# ಅಯ್ಯೆಕ್ಳ ಪರ್‌ಂಚೆಲ್

ಪರ್‌ಂಚಿರೆನೇ ಅಯ್ಯೆಕಮನೆಲಿ ಕೆಲ್ಸನಡಿದುಯಾ
ಪರ್‌ಂಚದಿದ್ದರೆ ಅಪ್ಪಂದಱರು ಮಧ್ಯಾಹ್ನ ಆದರು ಎದ್ದವೆನ
ಪರ್‌ಂಚಿರೆನೆ, ಅಪ್ಪ, ಒಲ್ಲಿ ಕೊಡ್ಕಿ ಎದ್ದವೆಯಾ
ಪರ್‌ಂಚಿರೆನೆ ಕಾಣೆ ಆದರ ಅರ್‌ಂಟಿನೋಡ್ವೆಯಾ
ಪರ್‌ಂಚಿರೆನೆ ಮಕ್ಕ ತೂಗ್ಯಂಡ್ ಪುಸ್ತಕ ಹಿಡಿವಯಾ
ಪರ್‌ಂಚಿರೆನೆ ನಾಳೆ ತಾದರ ಇಂದೇ ತಾವಯಾ
ಪರ್‌ಂಚಿರೆನೆ ನಾಳೆ ಮಾಡ್ದರ ಇಂದೇ ಮಾಡ್ವಯಾ
ಪರ್‌ಂಚಿರೆನೆ ಗಂಡ ಪೇಟೆಂದ ಬೇಗ ಬಾದ್‌ಯಾ
ಪರ್‌ಂಚಿರೆನೆ ಮುಗ್ದ ಸಾಮಾನ್ ಹೇಂಗಾರ್ ತಾದುಯಾ
ಪರ್‌ಂಚಿಗೆನೆ ಕುಡ್ಕ ಗಂಡನ ಸೆಱನಿನೂ ಬಿರಿದುಯ
ಪರ್‌ಂಚಿರೆನೆ ಮೊರಿವ ನಾಯಿಗ ಸುದ್ದಿ ನಿಲ್ಸ್‌ವೆಯಾ
ಪರ್‌ಂಚಿರೆನೆ ಸಾಲೆಗೆ ಮಕ್ಕ ಬೇಗ ಹೊರ್ಪ್ವೆಯಾ
ಪರ್‌ಂಚಿರೆನೆ ಕಱದ್ದ್ ತಿಂಬ ದನನ ಕಱಟ್ಟೆ ಹಾಕ್‌ವೊ
ಪರ್‌ಂಚಿರೆನೆ ಕೋಳಿಗಳ ಮುಚ್ಚಿ ಹಾಕುವೊ
ಪರ್‌ಂಚಿರೆನೆ ಕಱಮ್ಮಿ ಮಾಡಿವೆ ಫೋನ್‌ಲಿ ಮಾತಾಡ್ದರ
ಪರ್‌ಂಚಿರೆನೆ ಹಾಳಾದರ ಬೇಗ ಸೆರಿಮಾಡ್ಸ್‌ವಯಾ
ಪರ್‌ಂಚ್‌ವಯಾ ಸಾಲೆಬುಟ್ಟು ಹೈದ ಹಳ್ಳೆತಿರ್ಗ್ಗಿರೆ
ಪರ್‌ಂಚ್‌ವಯಾ ಮಂಜ ಮಾರ್ಕ್ ಹಱ ತೆಗ್ದರೆ
ಪರ್‌ಂಚ್‌ವಯಾ ಮಗಳ ಪುಸ್ತಕಱಲಿ ಲವ್‌ಲೆಟರ್ ಸಿಕ್ಕಿರೆ
ಪರ್‌ಂಚ್‌ವಯಾ ಕೆಲ್ಸದವು ರಜೇನ ಮಾಡಿರೆ
ಪರ್‌ಂಚೆಲ್ ಇಲ್ಲದ ಮನೆಗಳಂತು ಎಲ್ಲಿ ಇರಿಕಿಲೆ
ಪರ್‌ಂಚದಂತ ಅಯ್ಯೆ ಕಱಳು ಭೂಮಿಲಿರಿಕಿಲೆ
ಪರ್‌ಂಚ್‌ಕನ ಕೆಬಿಗೆ ಹತ್ತಿ ಇಸಮಂತಾದೆಯಾ
ಎದೆಗೆ ಹಾರಿ ಮೆಟ್ಟಿರೆನೂ ಶಡ್ಕ ಣಕ್‌ಯಾ
ಪರಂಚ್‌ದರ ಕೇಳ್ರೆ ಎಲ್ಲ ಬೊಗ್ಗೇ ಹೋದವೆಯಾ.

# ಜಮೂಲು ಗಮೂರಾಯಿಳ

ಮಯ ಮಯ ಕತ್ತಲೆ ಆಕಂಡ್ ಬಾತ್
8$^1/_2$ ಗಂಟೆ ಹೊಡೆಕೆದ್
ಆಚೆ ಕರೆ ಮನೆನ ಅಡ್ಗ್ಯೊಳೆಗೆಂದ ಗಣ ಗಣ ಕೇಳಿದೆಯೆ
ಗ್ಒಡ್ಕೆಂಗ ಮಡ್ಕೆಗ ಹೊಣ್ಕುದು ಕೇಳ್ದೆ
ಬಟ್ಲ್‌ಗ ಬಿದ್ದ್ ಟೈಂ ಟೈಂ ತೇಳ್ದೆ
ಒಡನೆ ಹೋಸಿದ ಗದ್ದೆನ ಪುಣೆಗೆ ಹೂಡುವ
ಕೋಲುಲಿ ಹೊಡ್ದಾಂಗೆ ಕೇಳ್ದೆ

ಇದ್ ಬಾರಿ ಜಗಳನೆಯಾ
ಗಂಡನ ಹೆಣ್ಣುನ ಬೈಂಕರ ಯುದ್ದನೆಯಾ
ಗಂಡನ ಕೈಲಿತ್ತ್ ಸೌದೆನ ಕೊಳ್ಳಿ
ಹೆಣ್ಣದ್ ಮರ್ಪದೆ ಮೂಲೆಲಿ ಅಲ್ಲಿ
ಮಕ್ಕವು ಹೆದ್ರಿ ಅಡಿಂಗಿದ್ ಹುಕ್ಕೊಳ
ಮೊಂದ್ರಿನ ಒಳಗೆನೆಯಾ
ಹೆಣ್ಣದ್ ಅಯ್ಯೋ ಮರ್ಡ್ವಗುಲ್ಲು
ಮಾತ್ ಮಾತ್‌ಗೆ ಎದುರುತ್ತರ ಅಲ್ಲೊ
ಹಾಂಕರ ಹಾಂಕರ ಸೊಕ್ಕತ್ತ್ಯೋದ
ಸೆನಿ ಬುಡ್ಸಿನೆ ತೇಳಿದ್ ಬೀತೊಂದು ಅಲ್ಲು
ಏನೂ ಜಗಳದ್‌ಯ ರಾಮಾ ಕೇಳಿಕೆಬೊತ್ತದ್‌ಯಾ

ಹಾಂಗೂ ಹೀಂಗೂ ಇರ್ಲೊಂದ್ ಕಳ್ತ್
ಜಗಳಕೆ ಮೊರಿವಾ ಬೊಳ್ಳುನು ನಿಲ್ಸಿತ್
ಕುದ್ದುದ್ ಕುದ್ದ್‌ದ್ ಜಗಳನ ಓಲ್ಪಿದೆ
ಗ್ರೇಸಿದೆ ಇವು ರಾಜ್ಯಾಕಿಲೆ ಮುಂದೆ
ಬೊಳ್ಪುಗೆ ಎದ್ದ್ ನೋಡ್ಕನ ನಾಯಾ ಜನನೇ ಬೇರೆವುಯಾ

ಕೋಸಿದ್ ಹಿಡ್ಕಂಡ್ ಬೈಕ್‌ಲಿ ಹೋದವೆ
ಕಿಟಿಕಿಟಿ, ಕುಟುಕುಟು ನೆಗೆನೂ ಆಡಿವೆ
ಹಾಂಗೆಯ ಹೀಂಗೆಯ ತೇಳಿದ್ ಪ್ರೊಲ್ಸ್‌ಲಿ
ಮಾತೂ ಆಡುವೆಯಾ

ದಾರಿಲಿಸಿಕ್ಕಿದ ದೋಸ್ತಿನ ಕೇಳ್ದೆ
ಡೋಂಗಿನ, ಮಾಡಿ ಹೇಳ್ತಂವ ಅಂದೆ
ಮೊದುವೆನು ಆಕನ ನೀನು ಮುಂದೆ
ಕತೆನೂ ಕೂಡ ಎಲರ್‍ದೊಂದೆ
ಜಗಳಾಡುವಗಡ ಅಡ್‌ಗ್ಯೊಳಗೆ
ರಾಜ್ಯಾವಗಡ ಒಲ್ಯೊಳಗೆ.



# ರೂ

ಬೊದ್ಕ್ ಅರ್ತಾಕೆ ಮುಂದೆ ಎಲ್ಲವೂ
ಬೊದ್ಕಿಕೆ ತಕ್ಕ ಎಲ್ಲವ್ಕೆ ಇದ್ದದೆ, ಎಲ್ಲವೂ ದುಡ್ಡುನವೆ
ಮುಡಿಗಟ್ಲೆ ಗದ್ದೆನವೆ
ಮಿರ್ಂಡಿ ಅಯ್ಯೆ ಉಣ್ಸ್‌ದು
ಕರ್ಂಡಿ ಅಪ್ಪ ಕುಡ್ಸ್‌ದು
ಬಣ್ಣದ ಅಂಗಿ ಹಾಕಿ ಹೊರ್ಬ್ಾಕನ
ಪೇಂಟು ಜೋಬುಗೆ ಅಪ್ಪ ದುಡ್ಡು ಕೊಟ್ಟದೆ
ರೆಕ್ಕೆಲಿ ತೊಪ್ಪುಳು ಬಾಕನ ವರೆಗೆ ಹಕ್ಕಿ ತಿನ್ಸ್‌ಕೊಟ್ಟದೆ
ಕೋಗಿಲೆಂತ ಗೊತ್ತಾದರೂ ಕಕ್ಕೆ ಎಲ್ಲಿ ಬುಟ್ಟದೆ
ಹೊರಗೆ ಹಾರಿವೆ ಜಗತ್ತ್‌ಗೆ ಬೊದ್ಕಿಕಾಗಿ
ಕಾದವೆ ಮುದಿಜೋಡಿಗ ಬಲಕುಂದಿ ಕೈತುತ್ತ್‌ಗಾಗಿ
ಬೊದ್ಕೇ ಋಣಾನುಬಂಧಗಳ ಸಂಕಲೆ

ಅರ್ಥಾಕೆ ಮುಂದೆ ಎಲ್ಲೆಲ್ಲೂ ಸಂಪೊತ್ತು
ಜೋಬುಲಿ ನೂರಲ್ಲ ನೂರೈವತ್ತು
ಕಾಂಬದೆಲ್ಲ ಪೊಲ್ಯ್ ನೋಡ್ಕನಾದೆ ಮೊಲ್ಯ್
ನೂರೆಂಟ್ ದಾರಿಗ, ಬಾದುಲೆಯಾ ಮಾರಿಗ
ಅರ್ಥಾದೆ ಬೊದ್ಕ್ ಕೆಲವ್ಕೆ ಸರ್ತಾಗಿ ಕ್ಯಾಲೆಲಿಬಿದ್ದ

ಅಯ್ಯಪ್ಪನ ಉಚ್ಚೆ ಹೇಲು ಬಾಚ್‌ಕನ
ಅರೆ ಹೊಟ್ಟೆಲಿದ್ದರೂ ಬಟ್ಲ್‌ನ ಇನ್ನೊಬ್ಬ ನೆಕ್ಕ್‌ಕನ
ಕೆಲವು ಸೊರ್ತದಾರಿ ಹಿಡ್ದರೆ, ಕೆಲವು ಅಡ್ಡದಾರಿ ಹಿಡ್ದವೆ
ಎದೆಗಊಟ್ಟೆ ಇದ್ದರೂ ಸಮುಮಟ್ಟ್‌ಲಿಲ್ಲದ ಮನ್ಸ್‌ಲಿ
ಕೆಲವು ಬೊಳ್ಳಿ ತಕಊಂಡ್ ಬೀಜಮರ ಹುಡ್ಕಿವೆ.

# ಕಾಳ್ಯಾನ ಬಟ್ಲ್

ಕಅಟ್ಟ್ ತಲೆಲಿ ಹೊತ್ತ್‌ಕಅಂಡ್ ಪುಟ್ಟನಪ್ಪ ಹೋದು
ಕಟ್ಟೆ ಕುಟ್ಟನಂಗ್‌ಡಿಲಿ ಅಡ್ಕೆನದರ ಮಾರ್ದಾ
ಹೆಣ್ಣ್ ಹೇಳಿಟು ಸೀರೆ ತಕಣಿ ಬಟ್ಟೆ ಅಂಗ್‌ಡಿಗೋದಾ
ಬಟ್ಟೆ ತಕಂಡ್ ಲೊಟ್ಟೆಬುಡಿಕೆ ಟೈಲರ್‌ನೊಟ್ಟಿಗೆ ಕುದ್ದಾ
ಮಧ್ಯಾಹ್ನಾತ್ ಅಲ್ಲೆ ಹೋಟ್ಲ್‌ಲಿ ಮೀನುಗೈಪುಲ್ಯುಂಡ
ಬೊಗ್ಗ್‌ಸಿ ಬೊಗ್ಗ್‌ಸಿ ಬೊರೋಂ ತೇಳಿ ಸಾರ್‌ನನುಕುಡ್ದಾ

ಮನೆಲಿ ಮಾಮೂಲು ಉಂಬ ಚೆಟ್ಟೆ ಒಡ್ದು ಹೋಗುಟಂತ
ಓಟ್ಲ್‌ಲ್ಯುಂಡ ಬಟ್ಲ್‌ನಂತಅದ್ ಪೇಟೆಂದವುತಅಕಂಡಾ
ಪೊಕ್ರಿನಲ್ಲಿಂದ ನಾಕ್ ಎಸಳ್ ಕುಣೆಯ ಹೊಸೆಪುತಕಂಡಾ
ಕಾದ್ರಿನಲ್ಲಿಂದ 10 ರೂಪಾಯಿನ ಮೊತ್ತಿ ಮೀನು ತಕಂಡಾ
ಕೆಲ್ಸಿ ಕಟ್ಟೆಲಿ ಕಟ್ಟ್‌ನಿಸಿದ್ ತೊಟ್ಟೆಗೆಂತ ಹೋದಾ
ತೊಟ್ಟೆನೊಟ್ಟಿಗೆ ಬೇಸಿದೊಂದು ಮೊಟ್ಟೆನನೂ ತಿಂದಾ
ನಟ್ಟ ಬಿಸ್ಲ್‌ಲಿ ಎಲ್ಲಕೋಸಿ ನೇಲ್ಸಿಕಂಡ್ ಬಂದಾ
ಮೂರು ಮೂರು ಸಂಜೆ ಆಕನ ಮನೆಗೆ ಬಂದ್ ಸೇರ್ದಾ
ಸಂಜೆ ಆಕನ ಏನು ಗೈಪುಗಿಲ್ಲ್‌ಂತೇಳಿ ಹೆಣ್ಣು ಬೊಜ್ಜಿ ಕಡ್ಡಿತ್ತ್
ಕಳ್ಳಿಲಿ ಬೊಜ್ಜಿ ಗಂಜಿ ಇಕ್ಕಂಡ್ ಉಂಬಕೆ ಒರ್ಗಿಕುದ್ದಾ
ಉಂಡು ಆತು ತೆಳಿನ್ ಅವು ಮಾಮೂಲುನಾಂಗೆ ಕುಡ್ದಾ
ಕಳ್ಳಲಿದ್ದ ಬದನೆ ಬೊಜ್ಜಿ ಚಾಣೆ ತಲೆಗೆ ಬೀತ್
ಅಲ್ಲೆ ಇದ್ದ, ಹೆಣ್ಣು ಮಕ್ಕ ಹಾರಿಹಾರಿನೆಗಾಡ್ದ ೧

# ದೊಡ್ಡೋವು

ದೊಡ್ಡೋವು ಯಾರ‍್ಯಾರಲ್ಲ ದೊಡ್ಡವು ಆಕೆಲ್ಲ
ದೊಡ್ಡೋವು ನಾವೆ ನಾವೆಲ್ಲ
ಇದ್ದವೆ ನಮ್ಮಲೆ ಕೆಲವೆಲ್ಲ
ದೊಡ್ಡೋವು ದುಡ್ಡುನವಂತೂ ಅಲ್ಲ
ದೊಡ್ಡೋತ್ತನದವು ಅಲ್ಲೇ ಅಲ್ಲ
ದೊಡ್ಡೋವು ಜೀಪು ಕಾರ್‌ನವಲ್ಲ
ದೊಡ್ಡೋವು ಮಾಳಿಗೆ ಮನೆಯವು ಅಲ್ಲ
ದೊಡ್ಡೋವು ಟೀವಿ ಫ್ರಿಜ್‌ನವಲ್ಲ
ದೊಡ್ಡೋವು ಚಿನ್ನದ ಚೈನ್‌ನವಲ್ಲ
ದೊಡ್ಡೋವು ಎತ್ತರ ಜೋಡುನವಲ್ಲ
ದೊಡ್ಡೋವು ಬಣ್ಣದ ಚೂಡಿನವಲ್ಲ
ದೊಡ್ಡೋವು ರಬ್ಬರ್ ಹಾಕಿದವಲ್ಲ
ದೊಡ್ಡೋವು ಡೊನೇಷನ್ ಕೊಡುವವು ಅಲ್ಲ
ದೊಡ್ಡೋವು ದೊಡ್ಡ ಪ್ರ್ಯಾಕ್ಟ್ರಿನವಲ್ಲ
ದೊಡ್ಡೋವು ಮಾಳಿಗೆ ಮನೆಯವು ಅಲ್ಲ

ದೊಡ್ಡೋವು ನೂರು ಕಂಡಿನವಲ್ಲ
ದೊಡ್ಡೋವು ಪೌರ್ಲುನ ಮೋರೆನವಲ್ಲ
ದೊಡ್ಡೋವು ಬಿಳಿ ಬಿಳಿ ಮೈಯವು ಅಲ್ಲ
ದೊಡ್ಡವು ಇವೆ ಎಲ್ಲಾ ಇದ್ದವೆ ನಮ್ಮೊಳಗೆ ಎಲ್ಲ
ಕಾಯ್ಲೆಲಿ ಬಿದ್ದವಂಗೆ ನೆತ್ತರುಕೊಡಂವ
ಹೊಟ್ಟೆಸಿದವಂಗೆ ಗಂಜಿನಕೊಡಂವ
ಇತ್ಲರು ಅರೆ ಮಡೆನಾರ್ ಕೊಡಂವ
ಇಬ್ಬರ ಜಗಳ ಬುಡ್ಸಂವಯಾ
ತಪ್ಪಿದವ್ಕೆ ತಿಳಿ ಹೇಳಂವಯಾ

ಬೊತ್ತದಾಕನೊಟ್ಟಿಗಿರುವಂವಯಾ
ಮುಳ್ಂಗಿದವನ ಮೇಲೆತ್ತ್ಂವಯಾ
ಆಪತ್ತ್‌ಲಿ ರಕ್ಷಣೆ ಕೊಡುವಂವಯಾ
ಅರ್ಜೆಂಟ್‌ಗೆ ದುಡ್ಡು ಕೊಡುವಂವಯಾ
ದೊಡ್ಡೊವು ಯಾರೆಲ್ಲ ಇದ್ದವೆ ನಮ್ಮೊಳಗೆ ಎಲ್ಲ.





ಕನ್ನಡವೆಂಬ ಉಪಭಾಷೆಗೆ ಇಂದು
ಪ್ರೋ ಕೆ. ಕುಶಾಲಪ್ಪ ಗೌಡರು
ಲಿಪಿಯೊಂದನ್ನು
ರೂಪಿಸಿಕೊಟ್ಟಿದ್ದಾರೆ. ಹಾಗಾಗಿ
ಗೌಡಕನ್ನಡ ಸಾಹಿತ್ಯ ರಚನೆಗೆ ಹೊಸ
ದಾರಿ ತೋರಿಸಿಕೊಟ್ಟಂತಾಗಿದೆ.
ಯಶವಂತ ಕುಡಕಲ್ಲು ರಚಿಸಿರುವ
ಈ ಕವನಗಳು ಗೌಡಕನ್ನಡದ ಲಿಪಿ
ಬಳಸಿದ ಪ್ರಥಮ ಕೃತಿಯೆಂಬ
ಹೆಗ್ಗಳಿಕೆ ಪಾತ್ರವಾಗಿದೆ.
ಯಶವಂತ ಗೌಡಕನ್ನಡದ ಪಂಪ!
ಕಾವ್ಯದ ಕಲ್ಪನೆ, ಚಿತ್ರಣ, ನೂಪಣೆ,
ಪದ ಬಳಕೆ ಅತ್ಯಂತ
ಪರಿಣಾಮಕಾರಿಯಾಗಿ ಮೂಡಿ
ಬಂದಿವೆ. ಯಶವಂತ ಗೌಡಕನ್ನಡದ
ಅಗ್ರಗಣ್ಯ ಕವಿ ಎಂಬುದೇ ವಾಸ್ತವ.
ಅವನಿಗೆ ಬರೆಯುವ ಗುಣ ಸಿದ್ಧಿಸಿದೆ.
ಸ್ಥಳೀಯ ಜನ ಭಾಷೆಗಳನ್ನು
ಕೊಲ್ಲುತ್ತಿರುವ ಜಾಗತೀಕರಣದ
ವಿರುದ್ಧವೂ ಇದೊಂದು ಬಂಡಾಯ.

– ಎ. ಕೆ. ಹಿಮಕರ